ನಯಸೇನ ವಿರಚಿತ

# ಧರ್ಮಾಮೃತ ಸಂಗ್ರಹಂ



ದೇ. ಜವರೇಗೌಡ





ನರೇಶ್ ಅಂಡ್ ಕಂಪೆನಿ
ಹನುಮಂತನಗರ, ಬಸವನಗುಡಿ
ಬೆಂಗಳೂರು-೧೯

# ಪೀಠಿಕೆ*

## ೧

**ಹಿನ್ನೆಲೆ:** ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯದ ಸುಗ್ಗಿಯ ಕಾಲವೆಂದು, ನಡುಗನ್ನಡ ಸಾಹಿತ್ಯದ ಪ್ರಾರಂಭಶಕೆಯೆಂದು, ಧಾರ್ಮಿಕ ಸಾಮಾಜಿಕ ಮತ್ತು ಸಾಹಿತ್ಯಿಕ ಕ್ರಾಂತಿಯ ಪರ್ವಕಾಲವೆಂದು ಪರಿಗಣಿತ ವಾಗಿದೆ. ಆರನೆಯ ಚಾಳುಕ್ಯ ವಿಕ್ರಮಾದಿತ್ಯ ಐವತ್ತು ವರ್ಷಗಳ ಕಾಲ ಅವಿಚ್ಛಿನ್ನವಾಗಿ ರಾಜ್ಯವಾಳಿ (೧೦೭೬–೧೧೨೬) ದೇಶದಲ್ಲಿ ಶಾಂತಿ ಸಮಾ ಧಾನಗಳನ್ನು ನೆಲೆಗೊಳಿಸಿದ್ದನು. ಕನ್ನಡ ರಾಜ್ಯ ಅವನ ಅಧೀನತೆಗೊಳ ಪಟ್ಟು ಒಕ್ಕಟ್ಟಾಗಿತ್ತು. ಅವನ ಕೈಕೆಳಗೆ ಆಳುತ್ತಿದ್ದ ಸಾಮಂತರೂ ದಂಡ ನಾಥರೂ ಪ್ರತಾಪಶಾಲಿಗಳಾಗಿದ್ದು ಧರ್ಮಾನುರಾಗವನ್ನು ಹೊಂದಿದ್ದು, ಪ್ರಜೆಗಳ ಕ್ಷೇಮ ಚಿಂತನೆಯಲ್ಲಿ ತೊಡಗಿದ್ದರು. ಅವರು ಮತಭೇದವಿಲ್ಲದೆ ಎಲ್ಲ ದೇವಸ್ಥಾನಗಳಿಗೂ ದಾನದತ್ತಿಗಳನ್ನು ಬಿಡುತ್ತಿದ್ದರು; ಅನೇಕ ಕವಿ ಗಳಿಗೂ ಶಾಸನ ಲೇಖಕರಿಗೂ ಆಶ್ರಯದಾತರಾಗಿ ಕನ್ನಡ ಸಂಸ್ಕೃತಿ ಸಾಹಿತ್ಯ ಗಳಿಗೆ ರಕ್ಷೆಯಾಗಿದ್ದರು. ಈ ಸಾಮಂತರಲ್ಲಿ ದಕ್ಷಿಣ ಕರ್ಣಾಟಕದ ಹೊಯ್ಸಳರು ಪ್ರಮುಖರಾದವರು. ಅವರು ಚಾಳುಕ್ಯರ ಅಧೀನತೆಯನ್ನೊಪ್ಪಿ ಕೊಂಡು ತಮ್ಮ ಪ್ರದೇಶದಲ್ಲಿ ಸಾಕಷ್ಟು ಸ್ವಾತಂತ್ರ್ಯದಿಂದ ರಾಜ್ಯಭಾರ ನಿರ್ವಹಿಸುತ್ತಿದ್ದರು. ಸುಮಾರು ೧೧೬೧ ರಲ್ಲಿ ಕಳಚೂರ್ಯ ಬಿಜ್ಜಳ ಚಾಳುಕ್ಯ ರಾಜ್ಯಲಕ್ಷ್ಮಿಯನ್ನು ಅಪಹರಿಸಿಕೊಂಡಾಗ ಈ ಹೊಯ್ಸಳರೂ ತಾವು ಸ್ವತಂತ್ರರಾಜರೆಂದು ಘೋಷಿಸಿಕೊಂಡರು.

ಧಾರ್ಮಿಕ ಪರಿಸ್ಥಿತಿ ಈ ಶತಮಾನದ ಪ್ರಾರಂಭದ ಹೊತ್ತಿಗೆ ಒಳ ಗೊಳಗೆ ಹೊಗೆಯಾಡುತ್ತಿತ್ತು. ಆ ಕಾಲದ ಕನ್ನಡನಾಡು ಹಲವು ಮತ ಗಳ ಪ್ರದರ್ಶನ ಶಾಲೆಯಾಗಿತ್ತು. ಕಾಳಾಮುಖ, ಕಾಪಾಲಿ, ಪಾಶುಪತ

---

*ಈ ಪೀಠಿಕೆಯನ್ನು ಬರೆಯುವಾಗ ಮೈಸೂರು ಪ್ರಾಚ್ಯ ಪುಸ್ತಕ ಭಂಡಾರ ದಿಂದ ಪ್ರಕಾಶಗೊಂಡಿರುವ ಧರ್ಮಾಮೃತವನ್ನು ಬಳಸಿಕೊಂಡಿದೆ. ಇಲ್ಲಿ ನಮೂದಿ ಸಿರುವ ಪದ್ಯಸಂಖ್ಯೆಗಳೆಲ್ಲ ಆ ಮುದ್ರಣಕ್ಕೆ ಸಂಬಂಧಿಸಿವೆ,

ಮುಂತಾದ ಶೈವಮತಗಳೂ, ಸೂರ್ಯನನ್ನು ಪೂಜಿಸುವ ಸೌರಮತವೂ, ಗಾಣಾಪತ್ಯ ವೈಷ್ಣವ ಭಾಗವತಮತಗಳೂ ಒಂದರೊಡನೊಂದು ಮೇಲ್ಮೆಗಾಗಿ ಹುರುಡಿಸುತ್ತಿದ್ದ ಸಂಗತಿ ಬ್ರಹ್ಮಶಿವನ ಸಮಯಪರೀಕ್ಷೆಯಿಂದ ಸುಸಂವೇದ್ಯವಾಗುತ್ತದೆ. ಇವುಗಳ ಜೊತೆಗೆ ತಮಿಳು ದೇಶದಿಂದ ಶೈವದರ್ಶನವೂ, ಕಾಶ್ಮೀರದಿಂದ ಪ್ರತ್ಯಭಿನ್ನದರ್ಶನವೂ ಕನ್ನಡ ನಾಡನ್ನು ಪ್ರವೇಶಿಸಿದುವು. ಕಾಳಾಮುಖರು ದೊಡ್ಡದೊಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿ, ಶಾಸ್ತ್ರದಾನ ಪ್ರಸಾರ ಕಾರ್ಯಗಳಲ್ಲಿ ತೊಡಗಿದ್ದರು. ಇಷ್ಟೇ ಅಲ್ಲದೆ ಅವರು ಮನುಷ್ಯರಿಗೂ ಪಶುಗಳಿಗೂ ವೈದ್ಯಶಾಲೆಗಳನ್ನು ಕಟ್ಟಿಸುತ್ತಿದ್ದರು ; ಅನ್ನಸತ್ರಗಳನ್ನು ಸ್ಥಾಪಿಸುತ್ತಿದ್ದರು. ಇದಕ್ಕೆಲ್ಲ ಇವರಿಗೆ ಬೇಕಾಗಿದ್ದ ದ್ರವ್ಯ ಚಕ್ರವರ್ತಿಯಿಂದಲೂ, ಸಾಮಂತ ರಾಜರಿಂದಲೂ ಹರಿದು ಬರುತ್ತಿತ್ತು. ಮಠ ದೇವಾಲಯಗಳು ಕಾಲಕ್ರಮೇಣ ಕಾಳಾಮುಖರ ವಶವಾದುವಲ್ಲದೆ, ಅವರು ರಾಜಗುರುಗಳಾಗಿಯೂ ಖ್ಯಾತಿಯನ್ನು ಸಂಪಾದಿಸುತ್ತ, ಜನತೆಯಲ್ಲಿ ವಿಶೇಷ ಪ್ರಭಾವ ಬೀರುತ್ತಿದ್ದರು.

ನಾನಾ ವಿಧವಾದ ಶೈವಮತಗಳು ನಾಡಿನ ಮೂಲೆ ಮೊಡಕುಗಳಲ್ಲಿ ಹಬ್ಬುತ್ತ, ಜನ ಮನಸ್ಸಿನ ಗೊಂದಲಕ್ಕೆ ಕಾರಣವಾಗಿ ಅನಿಶ್ಚಯತೆ ತಾಂಡವ ವಾಡುತ್ತಿದ್ದ ಕಾಲದಲ್ಲಿ, ಇವುಗಳನ್ನೆಲ್ಲ ಸಮನ್ವಯಗೊಳಿಸಿ, ಬಹುಜನ ಪ್ರಿಯವಾಗಬಹುದಾದ ಮತವೊಂದನ್ನು ಸ್ಥಾಪಿಸಬೇಕೆಂಬ ಆಲೋಚನೆ ಬಸವಣ್ಣನವರಂಥ ಮಹಿಮಾವಂತ ವ್ಯಕ್ತಿಗಳಲ್ಲಿ ಮೂಡಿರಬೇಕು. ಸಮಕಾಲೀನ ಶೈವಮತಗಳ ಸಾರಭೂತವಾದ ಅಂಶಗಳನ್ನೊಳಗೊಂಡ ಕ್ರಾಂತಿಮೂಲವಾದ ಮತವೊಂದಕ್ಕೆ ಆ ಸಾಧಕ ಶ್ರೇಷ್ಠರು ಅಧ್ವರ್ಯುವಾಗಿ ನಿಂತರು. ಲಿಂಗಧಾರಣೆ, ಷಟ್ಸ್ಥಲ ಸಿದ್ಧಾಂತ ಮತ್ತು ಕಾಯಕಗಳು ಆ ಮತದ ವಿಶಿಷ್ಟ ಸಂಕೇತಗಳಾದುವು. ಶೈವ ಧರ್ಮದ ಕಡಲಿನಲ್ಲಿ ವೀರಶೈವದ ನವನೀತ ತೇಲಾಡಿತು. ಶೈವರು, ಆರಾಧ್ಯರು, ಜೊತೆಗೆ ನಾನಾ ಕಾಯಕದ ಸಾಮಾನ್ಯ ಜನ ಬಹು ಸಂಖ್ಯೆಯಲ್ಲಿ ನೂತನ ಮತವನ್ನು ಸ್ವೀಕರಿಸಿದರು. ಸಮಾಜದಲ್ಲಿ ತಮಗೆ ದೊರೆತ ಸ್ಥಾನಮಾನಗಳ ಘನತೆಯಿಂದ ಸಾಮಾನ್ಯರ ಜೀವನದಲ್ಲಿ ಹುರುಪು ಹುರಿಗೊಂಡು, ಉತ್ಸಾಹ ಕಳೆಯೇರಿ, ಕೆಚ್ಚು ನೆಚ್ಚುಗಳು ಹೆಚ್ಚುಮಡಿಯಾಗಿ, ಸಾಮಾಜಿಕ ಪ್ರಗತಿ ಕೈಗೂಡಿತು.

ಹೀಗೆ ನಾನಾ ದರ್ಜೆಯ ಮತ್ತು ನಾನಾ ಸಂಸ್ಕಾರಗಳ ಜನ ಹೊಸ ಮತವನ್ನವಲಂಬಿಸಿದ್ದರ ಪರಿಣಾಮವಾಗಿ ಹಳೆಯ ಮತಗಳು ಖಿಲವಾಗುತ್ತಿದ್ದುದರಿಂದ, ಎಲೆಲ್ಲೂ ಅಸಮಾಧಾನ ಕಿಡಿಯಿಡುತ್ತಿತ್ತು ; ಸನಾತನಿಗಳು ಉರಿದೇಳುವಂತಾಯಿತು. ಹೊಸದಾಗಿ ಮತಪರಿವರ್ತನ ಹೊಂದಿದವರು ಸಂಖ್ಯೆಯಲ್ಲಿಯೂ ಪ್ರಭಾವದಲ್ಲಿಯೂ ಭಾವಪ್ರದರ್ಶನದಲ್ಲಿಯೂ ಉಗ್ರವಾಗ ತೊಡಗಿದರು. ಹೀಗಾಗಿ ಖಂಡನ ಮಂಡನಗಳು, ಪರಸ್ಪರ ಮೂದಲಿಕೆಗಳು ದ್ವೇಷಾಸೂಯೆಗಳು, ವಾದವಿವಾದಗಳು ಉಲ್ಬಣಿಸಿದುವು. ಅನ್ಯಮತೀಯವಾದ ಆಚಾರ ವಿಚಾರಗಳು ಹೇಯವೆಂಬ ಖಂಡನೀಯವೆಂಬ, ಸ್ವಮತ ಸಂಬಂಧವಾದ ಆಚಾರ ವ್ಯವಹಾರಗಳು ಸರ್ವೋತ್ಕೃಷ್ಟವಾದುವೆಂಬ ಭ್ರಾಂತಿ ತಲೆದೋರಿ ಸಮಾಜದಲ್ಲಿ ತಿಕ್ಕಾಟ ತೀವ್ರಗೊಂಡಿತು. ಈ ಮತೀಯವಾದ, ಜೊತೆಗೆ ರಾಜಕೀಯವಾದ ಕಾರಣಗಳಿಂದ ಕಲ್ಯಾಣದಲ್ಲಿ ದಂಗೆಯುಂಟಾಗಿ ಕೋಲಾಹಲ ಎದ್ದಿರಬೇಕು. ಬಿಜ್ಜಳನ ಮರಣ ಈ ಸಂದರ್ಭದಲ್ಲಿ ಸಂಭವಿಸಿರಬೇಕು. ಬಿಜ್ಜಳ ಚಾಳುಕ್ಯ ರಾಜರನ್ನು ಮೂಲೆಗೊತ್ತಿ, ಸಿಂಹಾಸನವನ್ನಾಕ್ರಮಿಸಿಕೊಂಡದ್ದು ಚಾಳುಕ್ಯ ಪಕ್ಷದ ಕೆಲವು ಸಾಮಂತ ರಾಜರಿಗೆ ಅಸಹನೀಯವಾಗಿ ಕಂಡು ಈ ಮತಗಳ ಮೇಲಾಟದ ಗೊಂದಲದಲ್ಲಿ ತಮ್ಮ ಕೈವಾಡವನ್ನು ತೋರಿಸಿ, ಅವರು ತಮ್ಮ ಉದ್ದೇಶವನ್ನು ಸಾಧಿಸಿಕೊಂಡಿರಬೇಕು.

ಈ ಮತೀಯ ಕ್ರಾಂತಿ ಆಗಿನ ಕಾಲದ ಜನಜೀವನದ ಸಕಲಾವಯವಗಳನ್ನು ಸಂಸ್ಪರ್ಶಿಸಿತ್ತು. ಪ್ರತಿಯೊಂದು ಮತದ ಆಚಾರ್ಯರು ತಂತಮ್ಮ ಮತಗಳ ಪ್ರಸಾರಕ್ಕೆ ಸಾಹಿತ್ಯವನ್ನು ಮಾಧ್ಯಮವಾಗಿ ಬಳಸಿಕೊಂಡರು. ತಂತಮ್ಮ ಶಕ್ತ್ಯನುಸಾರವಾಗಿ ಪರಮತಗಳನ್ನು ಅವಹೇಳಿಸಿ, ವಿಡಂಬನೆಯ ಮೂಲಕ ರೇಗಿಸಿ, ದಯಾದಾಕ್ಷಿಣ್ಯವಿಲ್ಲದೆ ಟೀಕಿಸಿ, ಜನರನ್ನೊಲಿಸಿಕೊಳ್ಳಲು ಹುರುಡಿನಿಂದ ಪ್ರಯತ್ನಿಸಿದರು ; ತಮ್ಮ ಮತದ ತತ್ವಗಳು ಜನಸಾಮಾನ್ಯರಿಗೆ ಸುಲಭವಾಗಿ ತಿಳಿಯುವಂತೆ ಸರಸವಾದ ಶೈಲಿಯಲ್ಲಿ ನಿರೂಪಿಸಿದರು. ಆದ್ದರಿಂದ ಹಿಂದಿನಿಂದ ಬೆಳೆದು ಬಂದಿದ್ದ ಸಂಸ್ಕೃತ ಭೂಯಿಷ್ಠವಾದ ಚಂಪೂ ಶೈಲಿ ಕಣ್ಮರೆಯಾಗ ತೊಡಗಿತು. ಹಳೆಯ ವೃತ್ತಗಳ ಚಲಾವಣೆ ನಿಷಿದ್ಧವಾಯಿತು. ಆಡುವ ಮಾತು ಗ್ರಂಥಸ್ಥವಾಗತೊಡಗಿತು. ಹೊಸ

ಮತದ ಪ್ರಸಾರಕ್ಕೆ ಹೊಸ ರೂಪದ ಭಾಷೆ ಆವಶ್ಯಕವಾಯಿತು. ಹಳಗನ್ನಡದ ರೂಪಗಳು ಮಸುಳಿಹೋಗಿ ನಡುಗನ್ನಡದ ರೂಪಗಳು ಪ್ರಚುರಗೊಂಡುವು. ಭಾಷೆಯಲ್ಲಿ ಸತ್ವವೂ ಸರಳತೆಯೂ ಕೂರ್ಪೂ ಸಂಪ್ರಾಪ್ತವಾದುವು. ಆದ್ದರಿಂದ ಕನ್ನಡ ದೇಸಿಯ ಪುನರುಜ್ಜೀವನ ಹನ್ನೆರಡನೆಯ ಶತಮಾನದಲ್ಲಿ ಮತೀಯ ಸಂಘರ್ಷಣೆಯ ಫಲವಾಗಿ ಸಂಭವಿಸಿತೆಂದು ಹೇಳಬಹುದು. ಈ ಪುನರುಜ್ಜೀವನ ಮುಖ್ಯವಾಗಿ ವೀರಶೈವಮತದ ಪ್ರಸಾರದಿಂದ ಸಂಘಟಿಸಿತಾದರೂ, ಚಂಪೂಲೋಲರಾದ ಜೈನ ಕವಿಗಳನ್ನು ಮುಟ್ಟದಿರಲಿಲ್ಲ. ಅವರೂ ತಮ್ಮ ಮತಪ್ರಸಾರಕ್ಕೆ ಜನಸಾಮಾನ್ಯದ ಭಾಷೆಯನ್ನು ಅಳವಡಿಸಿಕೊಳ್ಳಬೇಕಾಯಿತು. ಆಡು ಮಾತಿನ ಸತ್ವವನ್ನೂ ಪ್ರಯೋಜನವನ್ನೂ ಗುರುತಿಸಿ, ಅದನ್ನು ತನ್ನ ಕಾವ್ಯದಲ್ಲಿ ಸಾರ್ಥಕವಾಗಿ ಬಳಸಿಕೊಂಡ ಶ್ರೇಯಸ್ಸು ಮೊಟ್ಟಮೊದಲನೆಯದಾಗಿ ಜೈನಕವಿಗಳ ಪೈಕಿ ನಯಸೇನನಿಗೆ ಸಲ್ಲಬೇಕಾಗಿದೆ.

ಹೀಗೆ ಹನ್ನೆರಡನೆಯ ಶತಮಾನ ಕನ್ನಡ ಸಾಹಿತ್ಯಕ್ಕೆ ಹೊಸ ಅವಸ್ಥೆಯನ್ನುಂಟು ಮಾಡಿತು. ಮಡುಗಟ್ಟಿ ನಿಂತು ಕೆಡುತ್ತಿದ್ದ ಸಾಹಿತ್ಯವಾಹಿನಿ ಕಟ್ಟೊಡೆದು ಕಾಲುವೆಯಾಗಿ ಹರಿದು ಹೊಸ ಕ್ಷೇತ್ರವನ್ನು ಬೆಳಸಲು ಕಾರಣವಾಯಿತು. ಒಟ್ಟಿನಲ್ಲಿ ರಾಜಕೀಯ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ದೃಷ್ಟಿಗಳಿಂದ ಈ ಶತಮಾನ ತನ್ನದೇ ಆದ ವೈಶಿಷ್ಟ್ಯದಿಂದ ಕಂಗೊಳಿಸುತ್ತಿದೆ.

೨

**ಕರ್ಣಾಟಕದಲ್ಲಿ ಜೈನಧರ್ಮ:** ದಕ್ಷಿಣ ಭಾರತಕ್ಕೂ ಜೈನ ಧರ್ಮಕ್ಕೂ ಬಹು ಪ್ರಾಚೀನವಾದ ಸಂಬಂಧವಿದೆ. ಋಷಭದೇವ ದಕ್ಷಿಣ ಭಾರತದಲ್ಲಿ ನಿರ್ವಾಣಹೊಂದಿದನೆಂದು ಭಾಗವತ ಹೇಳುತ್ತದೆ.[1] ನೇಮಿನಾಥನು ಪಲ್ಲವ ದೇಶಕ್ಕೆ ಬಂದ ಸಂಗತಿ ಜೈನಾಗಮಗಳಲ್ಲಿ ಉಲ್ಲೇಖಗೊಂಡಿದೆ. ಜೈನ ಧರ್ಮೀಯನಾದ ಖಾರವೇಲನ ಪಟ್ಟಾಭಿಷೇಕಕ್ಕೆ ಪಾಂಡ್ಯರಾಜ ಧನಧಾನ್ಯಗಳನ್ನು ಕಳಿಸಿದ್ದನೆಂಬ ವಿಷಯ ಹಾಥಿಗುಂಫ

1. ಜೈನಧರ್ಮ: ಪುಟ 108

(ಕ್ರಿ. ಪೂ. ೨ನೇ ಶತಮಾನ) ಶಾಸನದಿಂದ ತಿಳಿಯುತ್ತದೆ. ಮಹಾವೀರನ ಕಾಲದಿಂದಲೂ ಜೈನಧರ್ಮ ಪ್ರಚಾರಕರು ಆಂಧ್ರದೇಶಕ್ಕೆ ಬಂದು ಹೋಗುತ್ತಿದ್ದಂತೆ ಕಾಣುತ್ತದೆ. ಮಧುರೆ ಜಿಲ್ಲೆಯ ಗುಹಾಂತರ ದೇವಾಲಯಗಳಲ್ಲಿರುವ ಕೆಲವು ಶಿಲಾಲೇಖಗಳಲ್ಲಾದರೂ ಜೈನಮತದ ವಾಸನೆಯನ್ನು ಕಾಣಬಹುದೆಂದು ಶ್ರೀಮಾನ್ ಪಿ.ಬಿ. ದೇಸಾಯಿಯವರು ಅಭಿಪ್ರಾಯಪಡುತ್ತಾರೆ.[1] ಕರ್ಣಾಟಕದಲ್ಲಂತು ಜೈನಧರ್ಮ ಕ್ರಿಸ್ತಪೂರ್ವ ಮೂರನೆಯ ಶತಮಾನದಿಂದಲೂ ತುಂಬ ಪ್ರಭಾವಯುತವಾಗಿದ್ದು, ಕರ್ಣಾಟಕ ಸಂಸ್ಕೃತಿಯ ವಿಕಾಸಕ್ಕೆ ಬಹುಮಟ್ಟಿಗೆ ಕಾರಣವಾಗಿದೆ. ಯೂಪನೀಯ ಪಂಥದ ಆಚಾರ್ಯರಿಗೆ ಕರ್ಣಾಟಕ ಪ್ರಮುಖ ಕಾರ್ಯಕ್ಷೇತ್ರವಾಗಿತ್ತು.[2] ನಿಜಾಮಾಬಾದ್ ಜಿಲ್ಲೆಯ ಬೋಧನ ಬಾಹುಬಲಿಯ ರಾಜಧಾನಿಯಾಗಿತ್ತೆಂದು ಊಹಿಸಲವಕಾಶವಿದೆ.[3] ತಳಕಾಡಿನ ಗಂಗರು ಜೈನರಾಗಿದ್ದರು. ಇವರ ಕಾಲದಲ್ಲಿ ಅನೇಕ ಬಸದಿಗಳು ನಿರ್ಮಾಣವಾದುವಲ್ಲದೆ, ಜಗತ್ ಪ್ರಸಿದ್ಧವಾದ ಬಾಹುಬಲಿಯ ಮೂರ್ತಿ ಶ್ರವಣಬೆಳಗೊಳದಲ್ಲಿ ಕಂಡರಣೆಗೊಂಡಿತು. ಮೊದಮೊದಲ ಹೊಯ್ಸಳ ದೊರೆಗಳೂ ಜೈನಮತೀಯರಾಗಿದ್ದು ಜೈನಮತಕ್ಕೆ ವಿಶೇಷ ಪ್ರೋತ್ಸಾಹ ನೀಡುತ್ತಿದ್ದರೆಂಬ ವಿಷಯ ಶಾಸನಗಳಿಂದ ಗೊತ್ತಾಗುತ್ತದೆ. ರಾಷ್ಟ್ರಕೂಟ ಚಾಳುಕ್ಯ ರಾಜರಂತು ಅನೇಕ ಸಂಸ್ಕೃತ ಪ್ರಾಕೃತ ಮತ್ತು ಕನ್ನಡ ಕವಿಗಳಿಗೆ ಆಶ್ರಯದಾತರಾಗಿದ್ದರು. ಜೈನಸಾಹಿತ್ಯದಲ್ಲಿ ಬಹುಭಾಗ ರಚನೆಯಾದದ್ದು ದಕ್ಷಿಣ ಭಾರತದಲ್ಲೆಂದು ನಿಸ್ಸಂಶಯವಾಗಿ ಹೇಳಬಹುದು. ಕನಿಷ್ಠವೆಂದರೆ ಕ್ರಿಸ್ತಶಕೆಯ ಪ್ರಾರಂಭ ಕಾಲದಿಂದ ಹೊಯ್ಸಳ ವಿಷ್ಣುವರ್ಧನನ ಕಾಲದವರೆಗೆ ಜೈನಮತ ಕರ್ಣಾಟಕದಲ್ಲಿ ಪ್ರವರ್ಧಮಾನಸ್ಥಿತಿಯಲ್ಲಿತ್ತೆಂದು ಸಕಾರಣವಾಗಿ ಸಮರ್ಥಿಸಬಹುದು.

---

1. Jainism in South India, Page 30-31

2. ಈ ಸಂಪ್ರದಾಯ ಕ್ರಿ. ಶ. 148ರಲ್ಲಿ ಶ್ರೀ ಕಲಶನೆಂಬ ಶ್ವೇತಾಂಬರ ಸಾಧುವಿನಿಂದ ಸ್ಥಾಪನೆಯಾಯಿತಂತೆ.

(ಜೈನಧರ್ಮ— ಮಿರ್ಜಿ ಅಣ್ಣಾರಾವ್ : ಪುಟ 88)

3. Jainism in South India by P. B. Desai
Page 102-103

೯-೧೦ನೆಯ ಶತಮಾನಗಳಲ್ಲಿ ಮುಗಿಲು ಮುಟ್ಟಿದ್ದ ಜೈನಮತ ೧೧ನೆಯ ಶತಮಾನದಲ್ಲಿ ಇಳಿಮುಖವಾಗತೊಡಗಿತು. ಶೈವ ವೈಷ್ಣವ ಮತಗಳ ಪ್ರಾಬಲ್ಯದ ಜೊತೆಗೆ ಜೈನಮತದ ಜಟಿಲ ತತ್ತ್ವಪ್ರಕ್ರಿಯೆಗಳೂ ವೈದಿಕ ರೀತಿಯ ಚಾತುರ್ವರ್ಣ್ಯ ವ್ಯವಸ್ಥೆಯೂ ಇದಕ್ಕೆ ಕಾರಣವಾಗಿವೆ. ಸಾಮಾನ್ಯ ಜನ ಕಲ್ಯಾಣಾಕಾಂಕ್ಷಿಯಾದ ಶೈವ ವೈಷ್ಣವ ಮತಗಳ ಉದಾರ ನೀತಿ ಅವುಗಳ ತೀವ್ರ ಪ್ರಗತಿಗೆ ಸಹಾಯವಾಗಿದೆ. ಚಾಳುಕ್ಯರಾಜ ಎರಡನೆಯ ಜಯಸಿಂಹ (೧೦೧೮-೧೦೪೦) ನ ಮಹಾರಾಣಿ ಸುಗ್ಗಳೆ ದೇವರದಾಸಿಮಯ್ಯನ ಶಿಷ್ಯೆಯಾಗಿದ್ದಂತೆ,[1] ಪತ್ನಿಯ ಪ್ರಭಾವದಿಂದ ದೊರೆಯೂ ಮತಾಂತರ ಹೊಂದಿದಂತೆ[2] ಚರಿತ್ರೆಯ ಆಧಾರಗಳಿಂದ ಅಭಿವ್ಯಕ್ತವಾಗುತ್ತದೆ. ಅದೇ ಸಮಯದಲ್ಲಿ ರಾಜಧಾನಿ ಪೊಟ್ಟಲಗೆರೆಯಲ್ಲಿದ್ದ ನೂರಾರು ಬಸದಿಗಳು ನಾಶವಾಗಿ, ಅಲ್ಲಿದ್ದ ಶ್ರಾವಕರು ಮತಾಂತರ ಹೊಂದಿದಂತೆ ಬಸವ ಪುರಾಣದಿಂದ ತಿಳಿಯುತ್ತದೆ. ಮೊದಲನೆಯ ಸೋಮೇಶ್ವರನ ಕಾಲದಲ್ಲಿ ಚೋಳರು ಪುಲಿಗೆರೆಯವರೆಗೂ ಧಾಳಿಮಾಡಿ, ಪೆರ್ಮಾಡಿ ಗಂಗ ಕಟ್ಟಿಸಿದ್ದ ಜೈನದೇವಾಲಯಗಳನ್ನೆಲ್ಲ ನೆಲಸಮಗೊಳಿಸಿದಂತೆ ಶಾಸನಗಳಿಂದ ವ್ಯಕ್ತವಾಗುತ್ತದೆ.[3] ರಾಮಾನುಜ ಬಿಟ್ಟಿದೇವನನ್ನು ಮತಾಂತರಗೊಳಿಸಿದ ಕತೆ ಲೋಕ ಪ್ರಸಿದ್ಧವಾಗಿದೆ. ಕಳಚೂರ್ಯ ಬಿಜ್ಜಳನ ಕೃಪಾಶ್ರಯದಲ್ಲಿ ಜೈನಮತ ಮತ್ತೆ ತಲೆಯೆತ್ತಲನುವಾದರೂ, ಅದು ಹಿಂದಿನಂತೆ ಚೇತರಿಸಿಕೊಳ್ಳಲಾಗಲಿಲ್ಲ. ವೀರಗೊಗ್ಗಿದೇವ ಮತ್ತು ಏಕಾಂತದ ರಾಮಯ್ಯ[4] ಮೊದಲಾದ ಕ್ರಾಂತಿ ವೀರರ ಕಾರ್ಯಪಟುತ್ವದ ಪರಿಣಾಮವಾಗಿ ಜೈನಮತ ಖಿಲವಾಗತೊಡಗಿತು.

ಮತಪ್ರಸಾರ ಮತ್ತು ಮತ ಪರಿವರ್ತನ ಕಾರ್ಯ ಉಲ್ಬಣವಾಗಿದ್ದ ಕಾಲದಲ್ಲಿ ಮತಪ್ರಚಾರಕರ ವೈಷಮ್ಯ ದ್ವೇಷಾಸೂಯೆಗಳು ನಾನಾ ಮುಖ

---

1. ದೇವರದಾಸಿಮಾರ್ಯ ಪ್ರಶಸ್ತಿ : ಪುಟ 6

2. Jainism and Karnataka Culture by S. R. Sharma Page 25

3. ಅದೇ : ಪುಟ 26

4. Jainism in South India : Page 39

ಗಳಲ್ಲಿ, ನಾನಾ ರೂಪಗಳಲ್ಲಿ ಹೊರಹೊಮ್ಮುವುದು ಸಹಜ; ಅವು ಹೊರ ಹೊಮ್ಮುವ ಪ್ರಣಾಳಿಕೆಗಳಲ್ಲಿ ಸಾಹಿತ್ಯ ಪ್ರಕಾರವೂ ಒಂದು. ೧೧-೧೨ನೆಯ ಶತಮಾನಗಳ ಸಾಹಿತ್ಯ ಕೃತಿಗಳ ಪುಟಗಳನ್ನು ತಿರುವಿಹಾಕಿದಾಗ ಈ ಮಾತಿನ ಸತ್ಯತೆ ಹೆಜ್ಜೆಹೆಜ್ಜೆಗೂ ಎದ್ದು ಕಾಣುತ್ತದೆ. ವೀರಶೈವ ಬ್ರಾಹ್ಮಣ ಜೈನಮತೀಯರು ತಂತಮ್ಮ ಮತಗಳ ಅಸ್ತಿತ್ವಕ್ಕಾಗಿ ಮತ್ತು ಅವುಗಳ ಉಚ್ಛ್ರಾಯಕ್ಕಾಗಿ ಪರಸ್ಪರ ಕಲಹಗಳಲ್ಲಿ ತೊಡಗಿದ್ದ ಸಮಯದಲ್ಲಿ ನಯಸೇನ ಕನ್ನಡ ನಾಡಿನಲ್ಲಿ ಜನಿಸಿ, ಮತಪ್ರಚಾರ ಕಾರ್ಯವನ್ನು ಕೈಬಿಡದೆ, ಸಾಹಿತ್ಯಕ್ಕೂ ಅಪಚಾರವೆಸಗದೆ, ಗಂಟುನಂಟುಗಳೆರಡನ್ನೂ ಉಳಿಸಿಕೊಂಡು ಕೃತಿರಚನೆಮಾಡಿ, ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಭದ್ರವಾದ ಸ್ಥಾನಗಳಿಸಿ ಕೊಂಡಿದ್ದಾನೆ.

೩

**ಕವಿಯ ಕಾಲ ದೇಶಾದಿವಿವರ :** ಕವಿಯ ಕಾಲ ದೇಶಾದಿಗಳ ವಿಚಾರವಾಗಿ ಹೆಚ್ಚು ತೊಡಕಿಲ್ಲ. ತನ್ನ ಗ್ರಂಥದ ಕೊನೆ ಮೊದಲು ನಡುವೆ ಗಳಲ್ಲಿ ಅವನು ಸ್ವಕೀಯವಾದ ಕೆಲವು ವಿಷಯಗಳನ್ನು ಹೇಳಿಕೊಂಡಿದ್ದಾನೆ. ಕಾಲದ ವಿಷಯದಲ್ಲಿ ಅವನ ಹೇಳಿಕೆ ಸಂದೇಹದೂರವಾಗಿದೆ.

ಗಿರಿಶಿಖಿ ವಾಯುಮಾರ್ಗ ಶಶಿಸಂಖ್ಯೆಯೊಳಾವಗಮೊಂದಿ ವರ್ತಿಸು
ತ್ತಿರೆ ಶಕಕಾಲಮುನ್ನತಿಯ ನಂದನವತ್ಸರದೊಳ್ ಮಹೋತ್ಸವಂ
ಬೆರೆಸೆಸೆದಿರ್ದ ಭಾದ್ರಪದಮಾಸದೊಳಗ್ಗದ ಶುಕ್ಲಪಕ್ಷದೊಳ್
ನಿರುಪಮಮಪ್ಪ ಪಾಡಿವದೊಳೊಪ್ಪುವ ಹಸ್ತಯುತಾರ್ಕ ವಾರದೊಳ್ ೧೪-೧೬೪

ಎಂಬ ಪದ್ಯದಲ್ಲಿ ಕವಿ ಗ್ರಂಥವನ್ನು ರಚಿಸಿ ಮುಗಿಸಿದ ದಿನವನ್ನು ಸೂಚಿಸಿದ್ದಾನೆ. ಕವಿಯ ಹೇಳಿಕೆಯ ಪ್ರಕಾರ 'ಈ ಗ್ರಂಥವನ್ನು ಶಕ ೧೦೩೭ರಲ್ಲಿ ಬರೆದಂತೆ ತಿಳಿಯುತ್ತದೆ. ಆದರೆ ನಂದನ ವರ್ಷವು ೧೦೩೭ ಆಗುವುದಿಲ್ಲ; ೧೦೩೪ ಆಗುತ್ತದೆ. ಗಿರಿ ಎಂಬುದರಿಂದ ಜೈನರು ನಾಲ್ಕು ಎಂಬ ಸಂಖ್ಯೆಯನ್ನು ಸೂಚಿಸುವಂತೆ ತೋರುತ್ತದೆ.[1] ಹಾಗಿದ್ದರೆ ೧೧೧೨ರಲ್ಲಿ ಈ ಗ್ರಂಥವು

1. ನಯಸೇನನ ಕಾಲವನ್ನು ಸೂಚಿಸುವ ಪದ್ಯದ ಮೊದಲನೆಯ ಪದ ತಪ್ಪು ಬಿದ್ದಿರಬಹುದೆಂದು 'ಧರ್ಮಾಮೃತ'ದ ಸಂಪಾದಕರು ಸಂದೇಹಿಸುತ್ತಾರೆ. ಗಿರಿ ಶಬ್ದಕ್ಕೆ ಏಳು ಎಂದೇ ಅರ್ಥ. ಜೈನರಲ್ಲಿಯೂ ಅವಕ್ಕೆ ನಾಲ್ಕು ಎಂಬ ಅರ್ಥ ಎಲ್ಲಿಯೂ ಬಂದಿಲ್ಲವೆಂದು ಹೇಳುತ್ತಾರೆ.

ಹುಟ್ಟಿರಬೇಕು' ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ.[1] ಚಾಳುಕ್ಯವಂಶದ ಮೊದಲನೆಯ ಸೋಮೇಶ್ವರ ರಾಜ್ಯವಾಳುತ್ತಿದ್ದ ಕಾಲವದು.

ಕವಿಯ ಸ್ಥಳ ಮುಳುಗುಂದವೆಂದು ಗ್ರಂಥಾಂತ್ಯದ ಮತ್ತೊಂದು ಪದ್ಯದಿಂದ ವೇದ್ಯವಾಗುತ್ತದೆ.

ಮುಳುಗುಂದದೊಳಿರ್ದು ಮಹೋ
ಜ್ಜ್ವಳ ಧರ್ಮಾಮೃತಮನರ್ತಿಯಿಂದಂ ಭವ್ಯಾ
ವಳಿಗಱಿಪಿದಂ ಧರಿತ್ರೀ
ತಳಪೂಜ್ಯಂ ಸುಕವಿನಿಕರಪಿಕಮಾಕಂದಂ ೧೪–೧೬೮

ಸುಕವಿನಿಕರಪಿಕ ಮಾಕಂದಂ ಎನ್ನುವುದು ನಯಸೇನನ ಪ್ರೀತಿಯ ಬಿರುದು. ಈ ಬಿರುದು ಗ್ರಂಥದಲ್ಲೆಲ್ಲ ಆಗಾಗ್ಗೆ ಸುಳುಹುದೋರುತ್ತದೆ. ಧಾರವಾಡ ಜಿಲ್ಲೆಯ ಗದಗು ತಾಲ್ಲೂಕಿನ ಮುಳುಗುಂದವೇ ಕವಿಯ ಜನ್ಮಸ್ಥಳವೆಂಬ ಸಂಗತಿ ಮುಂದೆ ಉದ್ಧರಿಸಿರುವ ಶಾಸನಗಳಿಂದ ಸ್ಪಷ್ಟವಾಗುತ್ತದೆ.

ನಯಸೇನ ಗ್ರಂಥಾರಂಭದಲ್ಲಿ ಗುರು ಪರಂಪರೆಯ ಹೆಸರುಗಳನ್ನು[2]

---

1. He wrote it at Mulugunda and finished it in Saka 1037 the year Nandana ಎಂದು ಬಿ. ಎಲ್. ರೈಸ್‌ರು ಕರ್ಣಾಟಕ ಶಬ್ದಾನುಶಾಸನದ ಉಪೋದ್ಘಾತ (ಪುಟ 31) ದಲ್ಲಿ ನುಡಿದಿದ್ದಾರೆ.

2. ಅರ್ಹದ್ಬಲ್ಯಾಚಾರ್ಯ, ಗುಣಧರ ಭಟ್ಟಾರಕ, ಮಂಕ್ಷ್ನಾಚಾರ್ಯ, ನಾಗಹಸ್ತ್ಯಾಚಾರ್ಯ, ವೃಷಭಾಚಾರ್ಯ, ಧರಸೇನಾಚಾರ್ಯ, ಭೂತಬಲಿ, ಪುಷ್ಪದಂತ, ಕೊಂಡಕುಂಡ, ಸಿಂಹನಂದಿ, ಕೂಚಿ ಭಟ್ಟಾರಕ, ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ವಿದ್ಯಾನಂದ, ಅನಂತವೀರ್ಯ, ಸಿದ್ಧಸೇನ, ಶ್ರುತಕೀರ್ತಿ, ಪ್ರಭಾಚಂದ್ರ, ಬೊಪ್ಪದೇವ, ಏಳಾಚಾರ್ಯ, ವೀರಸೇನ, ಜಿನಸೇನ, ಗುಣಭದ್ರ, ಶುಭಚಂದ್ರ, ಅಜಿತಸೇನ, ಸೋಮದೇವ, ನರೇಂದ್ರಸೇನ, ನಯಸೇನಮುನಿ, ದಿವಾಕರನಂದಿ, ಶುಭಚಂದ್ರ, ರಾಮಣಂದಿ, ನರೇಂದ್ರಸೇನಮುನಿ, ಭೇರುಂಡಪಂಡಿತ, ವಾಸುಪೂಜ್ಯ, ಪದ್ಮಣಂದಿ, ಮೇಘಚಂದ್ರ, ಮಾಘಣಂದಿ, ಪ್ರಭಾಸೇನ, ಅರ್ಹಣಂದಿ, ಶ್ರುತಕೀರ್ತಿ, ರಾಮಸಿಂಹ, ವಾಸುಪೂಜ್ಯ, ಚಾರುಸೇನ, ಕುಕ್ಕುಟಾಸನ, ಮಲಧಾರಿಮುನಿ, ಮೇಘಚಂದ್ರ, ರಾಮಸೇನ, ಕನಕನಂದಿ, ಅಕಲಂಕದೇವ (ಪ್ರಥಮಾಶ್ವಾಸದ 9ರಿಂದ 38ರವರೆಗಿನ ಪದ್ಯಗಳಲ್ಲಿ ಇವರ ವಿಷಯ ಬರುತ್ತವೆ.)

ಉಲ್ಲೇಖಿಸುವಾಗ, ನರೇಂದ್ರಸೇನಮುನಿ ತನ್ನ ಗುರುವೆಂದು ಹೇಳಿಕೊಳ್ಳುತ್ತಾನೆ.

ಗುರು ವಿದ್ಯಾಬ್ಧಿನರೇಂದ್ರಸೇನ ಮುನಿಪಂ ತ್ರೈಲೋಕ್ಯ ಚಕ್ರೇಶ್ವರಂ
ಪರಮ ಶ್ರೀಜಿನನಿಷ್ಟದೈವನಮಳಂ ಶ್ರೀಜೈನಯೋಗೀಶ್ವರರ್
ಪರಮಾರ್ಥಂ ತನಗಾಳ್ದರುತ್ತಮವಿನೇಯರ್ಬಂಧುವರ್ಗಂ ನಿಜಾ
ದರದಿಂದೆಂದೊಡೆ ಭಾಪು ಧನ್ಯನೆ ದಿಟಂ ವಾತ್ಸಲ್ಯರತ್ನಾಕರಂ          ೧–೫೬

ಸಾಮಾನ್ಯವಾಗಿ ಪ್ರತಿಯೊಂದು ಆಶ್ವಾಸಾಂತ್ಯದ ಪದ್ಯದಲ್ಲಿಯೂ 'ತ್ರೈವಿದ್ಯ ಚಕ್ರೇಶ್ವರ ವಿಮಳ ಪದಾಂಭೋಜ ಭೃಂಗಂ' ಎಂದು ಹೇಳಿ ತನ್ನ ಗುರುವನ್ನು ನೆನೆಯುತ್ತಾನೆ. 'ತ್ರೈವಿದ್ಯ ಚಕ್ರೇಶ್ವರ' ಎನ್ನುವುದು ನರೇಂದ್ರಸೇನಮುನಿಯ ಬಿರುದಾಗಿದ್ದಂತೆ ತೋರುತ್ತದೆ.

ನಯಸೇನ ಸ್ತುತಿಸಿರುವ ಗುರುಪರಂಪರೆಯಲ್ಲಿ ನರೇಂದ್ರಸೇನಮುನಿ ಎಂಬ ಹೆಸರು ಮೂರು ಬಾರಿ (೧–೨೦, ೨೪, ೫೬) ಬಂದು ಈ ಮೂವರು ಭಿನ್ನವ್ಯಕ್ತಿಗಳಿರಬೇಕೆಂಬ ಭಾವನೆಗೆ ಅವಕಾಶವಿತ್ತಿದೆ. ಮೊದಲನೆಯ ಮತ್ತು ಎರಡನೆಯ, ಎರಡನೆಯ ಮತ್ತು ಮೂರನೆಯ ವ್ಯಕ್ತಿಗಳ ನಡುವೆ ಕೆಲವಾರು ಗುರುಗಳು ಆಗಿಹೋದಂತೆ ಉಲ್ಲೇಖವಿರುವುದರಿಂದ ಈ ಊಹೆ ಪ್ರಬಲವಾಗಿ ನಿಲ್ಲುತ್ತದೆ. ಹೀಗೆಯೇ ಮೊದಲನೆಯ ನರೇಂದ್ರಸೇನನಿಗೆ ನಯಸೇನನೆಂಬ ಶಿಷ್ಯನಿದ್ದುದಾಗಿ ಸೂಚನೆಯಿರುವುದರಿಂದ (೧–೨೧) ಧರ್ಮಾಮೃತದ ಕರ್ತೃ ಎರಡನೆಯ ನಯಸೇನನಿರಬೇಕೆಂದು ಭಾವಿಸಬಹುದಾಗಿದೆ.

ಮುಳುಗುಂದ (೧೦೫೩) ಮತ್ತು ಲಕ್ಷ್ಮೇಶ್ವರ (೧೦೮೧)ದ ಶಾಸನಗಳು ಈ ವಿಷಯದಲ್ಲಿ ಹೆಚ್ಚು ಬೆಳಕು ಬೀರುತ್ತವೆ. ನಯಸೇನ ಪಂಡಿತ ವ್ಯಾಕರಣ ಶಾಸ್ತ್ರದಲ್ಲಿ ಪಾರಂಗತನಾದ ಧೀಮಂತನೆಂದು ಮುಳುಗುಂದದ ಶಿಲಾಶಾಸನದಲ್ಲಿ[1] ವರ್ಣಿತನಾಗಿದ್ದಾನೆ.

ನಿನಗೇನೆಂಬೆನೊ ಶಾಕಟಾಯನ ಮುನೀಶನ್ನಾನೆ ಶಬ್ದಾನುಶಾ
ಸನದೊಳ್ ಪಾಣಿನಿ ಪಾಣಿನೀಯದೊಳೆ ಚನ್ದ್ರಂ ಚಾನ್ದ್ರದೊಳ್ ತಜ್ಜನೇ
ನ್ದ್ರನೆ ಜೈನೇನ್ದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ಪೋಲ್ವರೆ
ನ್ತೆನೆ ಪೋಲನ್ನಯಸೇನ ಪಣ್ಡಿತರೊಳನ್ಯರ್ವ್ವಾರ್ದ್ಧಿವೀತೋರ್ವ್ವಿಯೊಳ್

1. Epi. Ind. Vol XVI, Page 54

ವ|| ಇಂತು ಸಮಸ್ತ ಶಬ್ದಶಾಸ್ತ್ರ ಪಾರಾವಾರ ಸಾರಗನ್ನರ್ಯಸೇನ ಪಣ್ಡಿತದೇವರ್

ಶ್ರೀಮದ್ದಂಡನಾಯಕ ಬಲದೇವಯ್ಯಂಗಳು ಈ ನಯಸೇನ ಪಂಡಿತನ ಶಿಷ್ಯರಾಗಿದ್ದರೆಂದು ಸೊರಟೂರ ಶಾಸನವು (೧೦೭೨) ತಿಳಿಸುತ್ತದೆ.[1] ನಯಸೇನಪಣ್ಡಿತನ ಗುರು ನರೇಂದ್ರಸೇನಮುನಿಯೆಂದೂ, ನರೇಂದ್ರಸೇನನ ಗುರು ಕನಕಸೇನನೆಂದೂ, ಅವನ ಗುರು ಅಜಿತಸೇನನೆಂದೂ, ಇವರೆಲ್ಲರೂ ಮೂಲಸಂಘದ ಚಂದ್ರಿಕಾವಾಟ ಅಥವಾ ಸೇನ ಅನ್ವಯಕ್ಕೆ ಸೇರಿದವರೆಂದೂ ಈ ಶಾಸನದಿಂದ ಗೊತ್ತಾಗುತ್ತದೆ. ಧರ್ಮಾಮೃತದ ಪ್ರಾರಂಭದಲ್ಲಿ ಬರುವ ಗುರು ಪರಂಪರೆಯುಲ್ಲಿ ಕನಕಸೇನನ ಹೆಸರು ಕಾಣುವುದಿಲ್ಲ.

ನರೇಂದ್ರಸೇನ ತ್ರೈವಿದ್ಯನ ಶಿಷ್ಯ ನಯಸೇನನೆಂದೂ, ಅವನ ಶಿಷ್ಯ ನರೇಂದ್ರಸೇನ ತ್ರೈವಿದ್ಯಚಕ್ರೇಶ್ವರನೆಂದೂ, ಅವನ ಶಿಷ್ಯ ನಯಸೇನ ಸೂರಿಯೆಂದೂ ಲಕ್ಷ್ಮೇಶ್ವರದ ಶಿಲಾಶಾಸನದಿಂದ[2] ಸ್ಪಷ್ಟವಾಗುತ್ತದೆ. ಆ ಶಾಸನದ ಪದ್ಯವೊಂದರಿಂದ ನಯಸೇನನ ಕೀರ್ತಿ ಹೇಗೆ ದಿಗಂತವಿಶ್ರಾಂತವಾಗಿ ಹರಡಿತ್ತೆಂಬುದು ವ್ಯಕ್ತವಾಗುತ್ತದೆ.

ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾ
ನಿರೆನವಳಿರ್ಕ್ಕೆ ಚಿಃ ಸವತಿಯೊಳ್ಪುದುವಾಟ್ಪುದು ಕಷ್ಟಮೆನ್ದು ನಿ
ಷ್ಠುರ ವಚನಂಗಳಂ ನುಡಿದು ದಿಕ್ಕರಿಯಂ ಪರಿವೇಱಿ ಕೀರ್ತಿ ತಾಂ
ಪುರುಡಿಸಿ ದೂಱಿಪಳ್ವರ ತಪೋನಿಧಿಯಂ ನಯಸೇನ ಸೂರಿಯಂ

ಈ ನಯಸೇನನೂ ಧರ್ಮಾಮೃತದ ನಯಸೇನನೂ ವಿಭಿನ್ನರಲ್ಲವೆಂದು ಶ್ರೀಮಾನ್ ಪಿ. ಬಿ. ದೇಸಾಯಿರವರು ಅಭಿಪ್ರಾಯಪಡುತ್ತಾರೆ.[3] ಅವರು

---

1. ಕನ್ನಡನಾಡಿನ ಕೆಲವು ಶಾಸನ ಕವಿಗಳು—ಮೇವುಂಡಿ ಮಲ್ಲಾರಿ: ಪುಟ 26.

2. Epi Ind vol. xvi, page 59

3. One more Nayasena is known to the students of Kannada Literature. He is the author of Dharmamrita and there are reasons to believe that he was also a grammarian....These details lead us a step further and help us to equate Narendra II of the Lakshmeswara inscription with the namesake guru of the Kannada author Nayasena. On the strength of this identity we may call Nayasena of

ಚಾವುಂಡರಾಯನ ಪುರಾಣ ಮತ್ತು ಶಾಸನಗಳಿಂದ ಸಂಗ್ರಹಿಸಿರುವ ಚಂದ್ರಿಕಾವಾಟಾನ್ವಯದ ಗುರುಪರಂಪರೆಯನ್ನಿಲ್ಲಿ[4] ಕೊಟ್ಟಿದೆ.




ಉಪರ್ಯುಕ್ತ ಗುರುಪರಂಪರೆಯನ್ನು ಧರ್ಮಾಮೃತದ ಗುರುಪರಂಪರೆಯೊಡನೆ ಹೋಲಿಸಿ ನೋಡಿದಾಗ ಸಾಮ್ಯಗಳಿಗಿಂತ ವೈಷಮ್ಯಗಳೇ ಅಧಿಕ

---

Dharmamrita as Nayasena II of the Sena lineage of Chandrikavata commencing with Ajitasena (Jainism in South India—Page 136)

4. ಅದೇ : ಪುಟ 139

ವಾಗಿರುವಂತೆಯೂ, ಮೇಲಣ ಪಟ್ಟಿಯಲ್ಲಿ ಕೆಲವು ಕೊಂಡಿಗಳು ಬಿಟ್ಟು ಹೋಗಿರುವಂತೆಯೂ ತೋರುತ್ತದೆ. ಧರ್ಮಾಮೃತದ ಪಟ್ಟಿಯೂ ಕ್ರಮ ಬದ್ಧವಾಗಿರುವಂತೆ ಕಾಣುವುದಿಲ್ಲ: ಕೆಲವು ಹೆಸರುಗಳು ಪುನರಾವೃತ್ತಿಯಾಗಿರ ಬಹುದು ; ಅಥವಾ ಒಬ್ಬನೇ ಗುರುವಿ[1]ನ ಇಬ್ಬರು ಮೂವರು ಶಿಷ್ಯರು ಒಂದೊಂದು ಪದ್ಯದಲ್ಲಿ ಸ್ತುತ್ಯರಾಗಿರುವಾಗ ಅವರೆಲ್ಲರೂ ಗುರುಗಳೆಂಬ ಭ್ರಾಂತಿಯುಂಟಾಗಲೂ ಅವಕಾಶವಿದೆ. ಆದರೂ ಮೇಲಣ ಆಧಾರಗಳಿಂದ ಸದ್ಯಕ್ಕೆ ಕೆಲವು ನಿರ್ಣಯಗಳನ್ನು ಮಾಡಬಹುದಾಗಿದೆ :

೧. ಮುಳುಗುಂದ ಶಾಸನದ ನಯಸೇನನೂ ಧರ್ಮಾಮೃತ ಕಾವ್ಯದ ಕರ್ತೃವೂ ಭಿನ್ನವ್ಯಕ್ತಿಗಳು.

೨. ಧರ್ಮಾಮೃತದ ಪ್ರಥಮಾಶ್ವಾಸದ ೨೧ನೆಯ ಪದ್ಯದಲ್ಲಿ ಉಲ್ಲೇಖ ಗೊಂಡಿರುವ ನಯಸೇನನೂ ಮುಳುಗುಂದಶಾಸನದ ನಯಸೇನನೂ ಅಭಿನ್ನ ರಾಗಿರಬಹುದು.

೩. ಧರ್ಮಾಮೃತದ ಕರ್ತೃ ಎರಡನೆಯ ನಯಸೇನ

೪. ಎರಡನೆಯ ನರೇಂದ್ರಸೇನ (ಧರ್ಮಾಮೃತದ ಪ್ರಕಾರ ಮೂರನೆಯವನಿರಬಹುದು ?) ಎರಡನೆಯ ನಯಸೇನನ ಗುರು.

ಧರ್ಮಾಮೃತವೊಂದೇ ನಯಸೇನ ರಚಿಸಿರುವ ಗ್ರಂಥ. ಅವನು ಕನ್ನಡ ವ್ಯಾಕರಣವನ್ನು ಬರೆದಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ. ಎರಡ ನೆಯ ನಾಗವರ್ಮನ (೧೧೪೫) ಭಾಷಾಭೂಷಣದ 'ದೀರ್ಘೋಕ್ತಿ ನಯ ಸೇನಸ್ಯ' ಎಂಬ ೭೪ನೆಯ ಸೂತ್ರ[1] ಈ ಊಹೆಗೆ ಸ್ಫೂರ್ತಿ ನೀಡಿದೆ. ಆದರೆ ನಯಸೇನ ಬರೆದ ವ್ಯಾಕರಣಗ್ರಂಥ ಯಾವುದೂ ಸಿಕ್ಕಿಲ್ಲ. ಅಷ್ಟೇ ಅಲ್ಲ ಅವನು ವೈಯಾಕರಣಿ ಎಂಬುದಕ್ಕೆ ಧರ್ಮಾಮೃತದಿಂದ ವ್ಯಕ್ತಾವ್ಯಕ್ತ ಸೂಚನೆ ಯಾವುದೂ ಕಂಡಿಲ್ಲ. ಮೇಲಣ ವಾಕ್ಯಕ್ಕೆ ಉಪಷ್ಟಂಭಕವಾಗ ಬಹುದಾದ ಬಾಹ್ಯಾಭ್ಯಂತರ ಸಾಕ್ಷಿ ಏನೇನೂ ದೊರಕದಿರುವಾಗ, ನಯಸೇನ

---

1. ಬಿ. ಎಲ್. ರೈಸ್‌ರು 1884ರಲ್ಲಿ ಪ್ರಕಟಿಸಿದ ಮುದ್ರಣ.

ವ್ಯಾಕರಣ ಬರೆದಿದ್ದನೆಂದು ಊಹಿಸುವುದೂ ತಪ್ಪಾಗುತ್ತದೆ[1]. ಈ ವಿಷಯದಲ್ಲಿ ಪ್ರಬಲವಾದ ಸಾಕ್ಷಿ ಪ್ರಮಾಣಗಳು ದೊರೆಯುವ ತನಕ ಯಾವ ನಿರ್ಣಯವೂ ಸಾಧ್ಯವಿಲ್ಲ. ಬಹುಶಃ ಭಾಷಾಭೂಷಣದಲ್ಲಿ ಉಲ್ಲೇಖಗೊಂಡಿರುವ ನಯಸೇನನೂ ಮುಳುಗುಂದಶಾಸನದ ನಯಸೇನನೂ ಏಕವ್ಯಕ್ತಿಯಾಗಿರಬೇಕೆಂದು ತೋರುತ್ತದೆ.

ಧರ್ಮಾಮೃತಕಾವ್ಯದ ಕರ್ತೃವಾದ ನಯಸೇನ ಮುಳುಗುಂದದ ಗುರುಪರಂಪರೆಯಲ್ಲೊಬ್ಬನಾಗಿದ್ದು, ಸುತ್ತಮುತ್ತಿನ ನಾಡಿನಲ್ಲೆಲ್ಲ ವಿದ್ವಾಂಸನೆಂದು, ಕವಿಶ್ರೇಷ್ಠನೆಂದು, ಮುನಿಕುಲಲಲಾಮನೆಂದು ಹೆಸರು ಪಡೆದಿದ್ದಿರಬೇಕು. ಕವಿ ಕೃತಿಯ ನಡುನಡುವೆ ತನ್ನ ಬಿರುದಾವಳಿಗಳನ್ನು ಘೋಷಿಸಿಕೊಂಡಿರುವುದರ ಮೂಲಕ ಸ್ವಕೀಯ ಸಂಗತಿಗಳನ್ನು ಸೂಚಿಸಿದ್ದಾನೆ. ಈ ಬಿರುದಾವಳಿಗಳಿಂದ ಅವನು ಮುನೀಂದ್ರ(೧-೮)ನೆಂದೂ, ಸುಕವಿಜನಮನಃಪದ್ಮಿನೀರಾಜಹಂಸ(೧-೫೭)ನೆಂದೂ, ಸುಕವಿನಿಕರಪಿಕಮಾಕಂದ(೧-೫೮)ನೆಂದೂ ಜಿನಸಮಯ ಪ್ರಾಕಾರನೆಂದೂ, ವಾತ್ಸಲ್ಯರತ್ನಾಕರನೆಂದೂ, ದಿಗಂಬರ ಸರೋಜ ರಾಜಹಂಸನೆಂದೂ, ಆಸನ್ನ ಭವ್ಯನೆಂದೂ, ಸಮ್ಯಕ್ತ್ವಚೂಡಾಮಣಿಯೆಂದೂ(೮-೪೬)ಪರನಾರೀನಂದನನೆಂದೂ (೧೩-೧೮೭) ಗೊತ್ತಾಗುತ್ತದೆ. ಆತ್ಮವೃತ್ತಾಂತವನ್ನು ತಿಳಿಸುವ ಕೆಲವು ಪದ್ಯಗಳನ್ನಿಲ್ಲಿ[2] ಉದ್ಧರಿಸಿದೆ :

ಸ್ಥಿರವಾಕ್ಯಂ ಸುವ್ರತಾಂಭೋನಿಧಿ ಸಕಲ ಜಗತ್ಪಾವನಂ ರಾಜಪೂಜ್ಯಂ
ಪರಮಶ್ರೀ ಜೈನಧರ್ಮಾಂಬರದಿನಕರನುದ್ವೃತ್ತಪೋಮೂರ್ತಿ ವಾಙ್ಮಾ
ಭರಣಂ ತ್ರೈವಿದ್ಯ ಚಕ್ರೇಶ್ವರ ವಿಮಳ ಪದಾಂಭೋಜ ಭೃಂಗಂ ಜಿನಶ್ರೀ
ಚರಣಾಲಂಕಾರ ಶೀರ್ಷಂ ಸುಕವಿ ಜನಮನಃ ಪದ್ಮಿನೀರಾಜಹಂಸಂ ೧-೫೭

---

1. He (Nagavarma) also mentions in sutra 73 a Kannada grammarian Nayasena, who cannot have anything to do with the sanskrit grammarian of the same name mentioned in a Mulgunda inscription of 1053 but must be identical with the Kannada author Nayasena who wrote Dharmamrita in 1112 (History of Kannada Literature : R. Narasimhacharya, page 46)

2. ಈ ಪದ್ಯಗಳ ಜೊತೆಗೆ ಆಶ್ವಾಸಾಂತ್ಯ ಪದ್ಯಗದ್ಯಗಳನ್ನೂ, 2-134, 8-46, 11-207, 13-183, 184, 187 ನೆಯ ಪದ್ಯಗಳನ್ನು ನೋಡಿ.

ಮಾನಿತ ಶೀಲ ನಿಧಾನನ
ನೂನಗುಣಂ ಸಕಳಭವ್ಯ ಜನ ಬುಧಜನ ಚಿ
ತ್ತಾನಂದಕರಂ ಕೇಳ್ದಯು
ಸೇನಬುಧಂ ಸುಕವಿನಿಕರ ಪಿಕಮಾಕಂದಂ ೧–೫೮

ನಯವಿದನಪ್ಪುದಱಿಂ ದು
ರ್ನಯಮುಮಂ ಬಿಸುಟೇಕಚಿತ್ತದಿಂ ನಂಬಿರ್ದಂ
ಭಯಮಿಲ್ಲದೆ ಜಿನಪತಿಯಂ
ನಯಸೇನಂ ಸುಕವಿನಿಕರಪಿಕ ಮಾಕಂದಂ ೧೨–೨೫

ಜಿನನೆ ಗುರು ಜಿನನೆ ದೈವಂ
ಜಿನನೆ ಕುಲಸ್ವಾಮಿ ಜಿನನೆ ನಂಬಿರ್ದಾಳ್ವಂ
ತನಗೆಂಬ ಪೆರ್ಚಿನಿಂ ನೆ
ಟ್ಟನೆ ನಲಿದಂ ಸುಕವಿನಿಕರ ಪಿಕಮಾಕಂದಂ ೧೨–೩೯

ಮನದೊಳ್ ಜಱಿಯದೆ ಬೆರ್ಚದೆ
ಮುನಿಯದೆ ಸೆಡೆಯದೆ ನಿಳಿಂಪನಗನಿಭಧೈರ್ಯಂ
ತನುವಿನ ಮೇಲಣ ಮೋಹಂ
ತನಗಿಲ್ಲದೆ ತಳರದಿರ್ದನುನ್ನತ ಚಿತ್ತಂ ೧೨–೪೦

ಎಸೆವ ಪರಸ್ತ್ರೀಯರ ತೆ
ಳ್ವಸಿಱಿಂ ಪೆತ್ತ ಬಸುಱೆಂಬನಲ್ಲದೆ ಮತ್ತೊಂ
ದಸದಾಳಪಮುನೆನ್ನಂ
ವಸುಮತಿಯೊಳ್ ಸುಕವಿನಿಕರ ಪಿಕ ಮಾಕಂದಂ ೧೩–೧೮೨

ಈ ಪದ್ಯಗಳಿಂದ ನಯಸೇನ ತಪಸ್ವಿಯೆಂದೂ, ರಾಜಪೂಜ್ಯನೆಂದೂ, ಜೈನಧರ್ಮರತನೆಂದೂ ತಿಳಿಯುತ್ತದೆ.

೪

**ಕಥಾಸಾರಾಂಶ:** ವಿಪುಳಗಿರಿಯಲ್ಲಿ ಶ್ರೀವೀರವರ್ಧಮಾನಸ್ವಾಮಿಗಳ ಸಮವಸರಣ ಬಂದು ನೆಲಸಿತ್ತೆಂಬ ವರ್ತಮಾನವನ್ನು ಕೇಳಿ ಶ್ರೇಣಿಕ ಮಹಾರಾಜ ಚೇಳಿನಿಮಹಾದೇವಿಯೊಡಗೂಡಿ, ಪಟ್ಟವರ್ಧನ ಗಜೇಂದ್ರವನ್ನೇರಿ, ಸಮವಸರಣವನ್ನೆಯ್ದಿ ಪರಮೇಶ್ವರನ ಪಾದಪದ್ಮಗಳನ್ನು ಸೇವಿಸಿ, ಮುಕುಳಿತ ಕರಕಮಳನಾಗಿ ನಿರ್ಭರಭಕ್ತಿಯಿಂದ ಮಹಾದೇವನನ್ನು ಸ್ತುತಿ

ಸಿದನು. ಅನಂತರ ಪರಮಪೂಜ್ಯರಾದ ಗೌತಮಗಣಧರರಿಗೆ ನಮಸ್ಕರಿಸಿ 'ದೇವಾ, ತಿರಿಕನಾರಕ ಮಾನವಾಮರ ಲೋಕಗಳಲ್ಲಿ ಹುಟ್ಟಿ ಸಾಯುವ ರಾಟಳದಂತೆ ತಿರಿಯುವ ಸಂಸೃತಿ ದುಃಖದಿಂದ ವಿಮುಕ್ತರಾಗಿ ಶಾಶ್ವತಸೌಖ್ಯ ವನ್ನನುಭವಿಸುವ ಮಾರ್ಗ ಯಾವುದು' ಎಂದು ಬೇಡಿಕೊಂಡನು. "ಶಾಶ್ವತ ಸುಖಕ್ಕೆ ಮುಕ್ತಿಯೊಂದೇ ದಾರಿ; ಆ ಮುಕ್ತಿ ತ್ರಿಜಗನ್ಮಾಂಗಲ್ಯವಪ್ಪ ಸಮ್ಯಗ್ದರ್ಶನವಿಲ್ಲದೆ ಕೈಗೂಡದು. ಆ ದರ್ಶನಕ್ಕೆ ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢ ದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆಗಳೆಂಬ ಎಂಟು ಅಂಗಗಳಿವೆ. ಕೊಲ್ಲದ, ಪುಸಿಯದ, ಕಳವಿನಿಸಿಲ್ಲದ, ಪರವನಿತೆಯರ್ಗೆ ಚಿತ್ತಂ ಸಲ್ಲದ, ಪರಿಗ್ರಹಕ್ಕಳಿಪಿಲ್ಲದ ಪಂಚಾಣುವ್ರತಗಳೂ ಸೇರಿ ಈ ಹದಿನಾಲ್ಕು ಮಹಾರತ್ನಗಳು. ಈ ರತ್ನ ಗಳನ್ನು ಸಾಧಿಸಿ, ನಿರ್ವೃತಿಯನ್ನೈದಿದ ಮಹಾಪುರುಷರ ಕಥೆಗಳನ್ನು ಹೇಳು ತ್ತೇನೆ" ಎಂಬುದಾಗಿ ಗೌತಮಗಣಧರರು ಕಥೆ ಹೇಳಲುದ್ಯುಕ್ತರಾದರು.

## 1. ದಯಾಮಿತ್ರ ಸೆಟ್ಟಿಯ ಕಥೆ

ಜಂಬೂದ್ವೀಪದ ನಡುವೆ ಮೇರುಪರ್ವತ; ಅದರ ದಕ್ಷಿಣದಲ್ಲಿ ಸೌರಾಷ್ಟ್ರವೆಂಬ ವಿಷಯ. ಅಲ್ಲಿ ಗಿರಿನಗರವೆಂಬ ಹಿರಿಯೂರು. ಪರಮಜಿನ ಭಕ್ತನಾದ ದಯಾಮಿತ್ರಸೆಟ್ಟಿ ಆ ಊರಿನ ದೊಡ್ಡ ವ್ಯಾಪಾರಿ. ಒಮ್ಮೆ ಆ ಸೆಟ್ಟಿ ವ್ಯಾಪಾರದ ಸಲುವಾಗಿ ಹೊರದೇಶಕ್ಕೆ ಹೋಗಲು ಸನ್ನದ್ಧನಾದನು. ಆ ಸಮಯಕ್ಕೆ ಸರಿಯಾಗಿ ವಸುಭೂತಿಯೆಂಬೊಬ್ಬ ಬ್ರಾಹ್ಮಣ ಬಂದು ಗಂಗಾಸ್ನಾನಕ್ಕಾಗಿ ತಾನು ಹೊರಟಿರುವುದಾಗಿಯೂ ಅವರ ಜೊತೆ ಯನ್ನಪೇಕ್ಷಿಸಿ ತಾನು ಬಂದುದಾಗಿಯೂ ಪ್ರಾರ್ಥಿಸಿದನು. ಸೆಟ್ಟಿ ಸಂತೋಷ ದಿಂದ ಸಮ್ಮತಿ ಸೂಚಿಸಿದನು. ಮರುದಿನ ದಯಾಮಿತ್ರಸೆಟ್ಟಿ ಮಡದಿ ಮಕ್ಕಳಿಗೆ ಬುದ್ಧಿ ಹೇಳಿ, ಪರಿವಾರದೊಡನೆ ಉತ್ತರಾಭಿಮುಖವಾಗಿ ಪ್ರಯಾಣ ಹೊರಟನು. ಪ್ರತಿದಿನ ಮೂರುಗಳಿಗೆ ಧರ್ಮಶ್ರವಣವಿಲ್ಲದೆ ಊಟಮಾಡುವು ದಿಲ್ಲವೆಂದು ದಯಾಮಿತ್ರಸೆಟ್ಟಿ ವ್ರತ ತೊಟ್ಟಿದ್ದನು. ಇದನ್ನರಿತ ವಸುಭೂತಿ ಅವನ ಹುಚ್ಚುತನಕ್ಕೆ ಸಕ್ಕು ನಿಜವಾದ ಧರ್ಮವನ್ನು ಬೋಧಿಸುವುದಾಗಿ ತಿಳಿಸಿ "ಕೂಟ್ ಕಾರಣವಲ್ಲದೆ ಗತಿ ಕಾರಣವುಲ್ಲದು; ಗತಿವಡೆವೆನೆಂಬುದು

ಕಾಯಕ್ಲೇಶಂಬೇಳ್ಬುದು. ಆ ಕಾಯಕ್ಲೇಶಂ ನಿಮ್ಮ ನಚ್ಚಿನ ಸವಣರ ಮೆಯ್ಯೊಳೆಳ್ಳನಿತುಮಿಲ್ಲ" ಎಂದು ನುಡಿದನು. 'ಕರ್ಮದ ತೀವ್ರತೆಯಿಂದೀ ಪಾರ್ವಂಗೆ ಲೌಕಿಕ ಧರ್ಮವೆ ಧರ್ಮವಾಗಿ ತೋರ್ಪುದು' ಎಂದು ಸೆಟ್ಟಿ ಪಶ್ಚಾತ್ತಾಪಪಟ್ಟು, ಸಮಯ ನೋಡಿ ಉಪಾಯ ಹೂಡಿ ಅವನಿಗೆ ಬುದ್ಧಿ ಕಲಿಸಬೇಕೆಂದು ನಿಶ್ಚಯಿಸಿದನು.

ಒಂದು ದಿನ ವಸುಭೂತಿಯನ್ನು ಹತ್ತಿರ ಕರೆದು ಕುಳ್ಳಿರಿಸಿಕೊಂಡು 'ಸ್ವಾಮಿ, ನಮ್ಮ ಕುಲದಲ್ಲಿ ಹಿಂದಿನಿಂದ ನಡೆದುಬಂದ ವ್ರತವೊಂದಿದೆ. ಋಷಿಗಳಿಂದ ದೊಡ್ಡ ವ್ರತವೊಂದನ್ನು ಮಾಡಿಸಿ, ವ್ರತಾಂತ್ಯದಲ್ಲಿ ಭೂರಿದಕ್ಷಿಣೆಯನ್ನು ನೀಡಬೇಕೆಂಬ ನಿಯಮವಿದೆ. ನಮಗೆ ನಿಮಗಿಂತ ಬೇರೆ ಋಷಿಗಳು ಬೇಕಿಲ್ಲ. ನೀವು ಆ ವ್ರತವನ್ನು ಕೈಕೊಂಡು ಮುಗಿಸುವುದಾದರೆ, ಕೇಳಿದಷ್ಟು ಹೊನ್ನು ಕೊಡುತ್ತೇನೆ' ಎಂದು ದಯಾಮಿತ್ರಸೆಟ್ಟಿ ನುಡಿದನು. ಆ ಮಾತಿನಿಂದ ವಸುಭೂತಿ ಹಿರಿ ಹಿರಿ ಹಿಗ್ಗಿದನು. ಕೈ ತುಂಬ ಹಣವಿದ್ದರೆ ಮಡದಿ ಮಕ್ಕಳೊಡನೆ ಸುಖವಾಗಿರಬಹುದೆಂದು ಮನಸ್ಸಿನಲ್ಲಿ ಮಂಡಿಗೆ ಸವಿಯುತ್ತಾ ನೋಂಪಿಯ ಕ್ರಮ ವಿವರಗಳನ್ನು ಕೇಳಿದನು. ನೋಂಪಿ ತೀರುವ ತನಕ ತುಪ್ಪ ಭಕ್ಷ್ಯ ಭೋಜ್ಯಾದಿಗಳನ್ನು ಕೈಗೆ ಹಾಕಿಸಿಕೊಂಡು ಊಟಮಾಡಬೇಕು; ಮರುದಿನ ಆ ಹೊತ್ತು ಬರುವವರೆಗೂ ಅನ್ನ ನೀರು ತಾಂಬೂಲಾದಿಗಳನ್ನು ತೊರೆದು ಧ್ಯಾನಲೀನವಾಗಿರಬೇಕು; ಮನೆಯಿಂದ ಹೊರಗೆ ಕಾಲಿಡಕೂಡದು; ಮೈ ಕೊಳೆಯಾಯಿತೆಂದು ಸ್ನಾನಮಾಡಕೂಡದು, ಬರೀ ನೆಲದಲ್ಲಿ ಪವಡಿಸಬೇಕು; ತಲೆಯ ಕೂದಲನ್ನು ಕೀಳಿಸಿಕೊಳ್ಳಬೇಕು—ಈ ರೀತಿ ಎರಡು ತಿಂಗಳ ಕಾಲ ವ್ರತವಾಚರಿಸಬೇಕು' ಎಂದು ಸೆಟ್ಟಿ ವಿವರಿಸಿದನು.

ಮಾರನೆಯ ದಿನ ದಯಾಮಿತ್ರಸೆಟ್ಟಿ ಪ್ರಯಾಣ ನಿಲ್ಲಿಸಿ, ಜಿನನನ್ನು ಪೂಜಿಸಿ, ವಸುಭೂತಿಯನ್ನು ಉತ್ತರಾಭಿಮುಖವಾಗಿ ಕುಳ್ಳಿರಿಸಿ, ಚಿಮುಟದಿಂದ ಕೂದಲು ಕೀಳುವಂತೆ ನಾಯಿಂದರಿಗೆ ಆಜ್ಞಾಪಿಸಿದನು. ವಸುಭೂತಿ ನೋವು ತಡೆಯಲಾರದೆ ಸುಂಟಿತಿಂದ ಕೋಡಗನಂತೆ ಬಿಸುಸುಯ್ಯ ತೊಡಗಿದನು. ಅನಂತರ ಸೆಟ್ಟಿ ಕೊಟ್ಟ ನಾನಾವಿಧ ಭಕ್ಷ್ಯಗಳನ್ನು ತಿಂದನು, ತುಪ್ಪವನ್ನು ಕುಡಿದನು. ರಾತ್ರಿ ಸಮೀಪಿಸಿದಂತೆಲ್ಲ ಅವನ ಗಂಟಲೊಣಗಿ

ಆಸತ್ತು ಬೇಸತ್ತನು. ಮರುದಿನ ಊಟದ ಸಮಯದಲ್ಲಿ ಭಕ್ಷ್ಯಭೋಜ್ಯ ಗಳನ್ನು ತಂದಡಕಿದಾಗ ವಸುಭೂತಿ ತಲೆಯಲ್ಲಾಡಿಸಿದನು. 'ನಮ್ಮ ಋಷಿಗಳು ಹೀಗೆಲ್ಲ ಮೊಂಡು ಮಾಡುವುದಿಲ್ಲ. ಹಾಕಿದ್ದನ್ನೆಲ್ಲ ಸದ್ದಿಲ್ಲದೆ ತಿನ್ನುತ್ತಾರೆ. ಭೂದೇವರಾದ ನಿಮಗೆ ಇದು ದೊಡ್ಡದೆ?' ಎಂದು ಸೆಟ್ಟಿ ಮೂದಲಿಸಿದನು. ವಸುಭೂತಿ ಮರುಮಾತಾಡದೆ ಹೇಗೋ ಕಷ್ಟದಿಂದ ಗುಡ್ಡೆಯನ್ನು ಕರಗಿಸಿದನು. ಹೀಗೆ ಏಳೆಂಟು ದಿನಗಳು ಸಂದುವು. ಅಷ್ಟ ರಲ್ಲಿ ಮೈಕಡಿತ ಬಾಯಾರಿಕೆ ತಲೆನೋವು ಅಸಹನೀಯವಾದುವು. ಕೆರೆಗೆ ಹೋಗಿ ಮೈ ತೊಳೆದುಕೊಂಡು ಒಂದೆರಡು ಗುಟುಕು ನೀರು ಕುಡಿದು ಬರು ವುದಾಗಿ ವಸುಭೂತಿ ಸೆರಗೊಡ್ಡಿ ಬೇಡಿಕೊಂಡನು. ಆಗ ಸೆಟ್ಟಿ ಗಟ್ಟಿಯಾಗಿ ನಕ್ಕು ಒಂದೆರಡು ಸಣ್ಣ ಪುಟ್ಟ ಪರೀಷಹಗಳಿಗೇ ಹೀಗೆ ಹೆದರಿದಿರಿ; ಆಮರ ಣಾಂತವಾಗಿ ಇಪ್ಪತ್ತೆರಡು ಪರೀಷಹಗಳನ್ನು ಸಹಿಸಿ ಹನ್ನೆರಡು ವಿಧವಾದ ತಪಸ್ಸುಗಳನ್ನೆಸಗುವ ಮಹಾಮುನಿಗಳ ಧೈರ್ಯ ಸಾಮಾನ್ಯವೆ? ಎಂದು ನುಡಿದನು. ಮುನಿಗಳನ್ನು ಹಾಗೆ ಹಳಿಯಬಾರದಿತ್ತೆಂದು ತಿಣುಕಿದ ವಸು ಭೂತಿ ಸೆಟ್ಟಿಗೆ ಕೈಮುಗಿದು ಜಿನಧರ್ಮವನ್ನು ಬೋಧಿಸುವಂತೆ ಪ್ರಾರ್ಥಿಸಿ ದನು. ಸೆಟ್ಟಿ ವಸುಭೂತಿಯ ನಿಷ್ಠೆಯನ್ನು ಪರೀಕ್ಷಿಸಿ, ಅವನಿಗೆ ಜಿನದೀಕ್ಷೆ ಕೊಟ್ಟನು.

ಮರುದಿನ ದಯಾಮಿತ್ರ ಸೆಟ್ಟಿ ಪರಿವಾರದೊಡನೆ ಪ್ರಯಾಣ ಮುಂದು ವರಿಸಿ, ನಂದ್ಯಾವಲಿಯೆಂಬ ಅಡವಿಯಲ್ಲಿ ಬೀಡುಬಿಟ್ಟನು. ಅಲ್ಲಿಯ ಕಾಡ ಬೇಡರು ಸೆಟ್ಟಿಯ ಪರಿವಾರವನ್ನು ಮುತ್ತಿದರು. ಆಗ ಸಂಭವಿಸಿದ ಕಲಹದಲ್ಲಿ ವಸುಭೂತಿ ಗಾಯವಡೆದು, ಸನ್ಯಾಸಗ್ರಹಣ ಮಾಡಿ, ಸತ್ತು, ಸದ್ದರ್ಶನದ ಫಲದಿಂದ ಸೌಧರ್ಮ ಕಲ್ಪದೆಡೆ ಮಣಿಪ್ರಭಾ ವಿಮಾನದಲ್ಲಿ ಮಣಿಕುಂಡಲ ದೇವನೆಂಬ ದೇವನಾಗಿ ಜನಿಸಿದನು.

## 2. ಲಲಿತಾಂಗನ ಕಥೆ (ನಿಶ್ಶಂಕೆ)

ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಕಾಶ್ಮೀರ ದೇಶ; ವಿಜಯಪುರ ಅದರ ರಾಜಧಾನಿ. ಅರಿಮಥನ ಅಲ್ಲಿಯ ದೊರೆ. ಸೌಂದರಿ ಆತನ ಪಟ್ಟ ದರಸಿ. ಲಲಿತಾಂಗ ಅವರ ಮಗ. ಅವರಿಬ್ಬರಿಗೂ ಮಗನಲ್ಲಿ ಅಮಿತವಾದ

ಮೋಹ. ಹೊಡೆಯದೆ ಬಯ್ಯದೆ ಗದರದೆ ಅವರು ಮಗನನ್ನು ಮುದ್ದಿನಿಂದ ಬೆಳೆಸಿದರು. ಅವನು ಗೆಳೆಯರೊಡಗೂಡಿ ಪುರಜನರನ್ನು ಪೀಡಿಸಿದರೆ ತಂದೆ ತಾಯಿಯರು ವಿನೋದಿಸುತ್ತಿದ್ದರು. ಪುರಜನ ಅವನ ಪೀಡೆಯನ್ನು ಸಹಿಸ ಲಾರದೆ ದೊರೆಯ ಬಳಿ ದೂರು ಹೊತ್ತರು. ಆಗ ದೊರೆಯ ಕಣ್ಣು ತೆರೆ ಯಿತು. ಹಾಗೆಯೇ ಬಿಟ್ಟರೆ ಮಗ ನಾಡಿಗೆ ಕಂಟಕವಾಗಬಹುದೆಂದು ಬೆದರಿ, ಮಗನನ್ನು ಬಳಿಗೆ ಕರೆದು ನಾನಾ ರೀತಿಯಾಗಿ ನೀತಿ ಬೋಧಿಸಿದನು.

ತಂದೆಯ ನೀತಿಬೋಧೆ ಗೋರ್ಕಲ್ಲ ಮೇಲೆ ಸುರಿದ ಮಳೆಯಾಯಿತು. ಲಲಿತಾಂಗನ ಉಪಟಳ ದಿನೇ ದಿನೇ ಹೆಚ್ಚಿತು. ಕೋಪಗೊಂಡ ತಂದೆ ದೇಶವನ್ನು ತ್ಯಜಿಸಿ ಹೋಗುವಂತೆ ಮಗನಿಗೆ ಕಟ್ಟಾಜ್ಞೆ ಮಾಡಿದನು. ಲಲಿತಾಂಗ ನೇಪಾಳ ದೇಶವನ್ನು ಪ್ರವೇಶಿಸಿ, ತಸ್ಕರಾಧಿಪತಿಯಾಗಿ, ಲೂಟಿ ದರೋಡೆ ಹಿಂಸಾಕೃತ್ಯಗಳಲ್ಲಿ ನಿರತನಾದನು. ಕಳ್ಳರಿಂದ ಅದೃಶ್ಯಘುಟಿಕೆ ಯನ್ನು ಪಡೆದು ಕಳ್ಳತನದಲ್ಲಿ ನಿಸ್ಸೀಮನಾಗಿ ಅಂಜನಚೋರನೆಂದು ಪ್ರಸಿದ್ಧಿಯಾದನು. ಆ ಊರಿನ ಅನಂಗಸೌಂದರಿಯೆಂಬ ಸೂಳೆಯೊಡನೆ ಸ್ನೇಹ ಸಂಪಾದಿಸಿ, ಆವಳು ಕೇಳಿದ ಸುವಸ್ತುಗಳನ್ನು ಪ್ರಪಂಚದಲ್ಲೆಲ್ಲಿಯೇ ಇರಲಿ ತಂದುಕೊಡುತ್ತಿದ್ದನು.

ಒಂದು ದಿನ ಆ ಸೂಳೆ ಬೀದಿಯಲ್ಲಿ ಹೋಗುತ್ತಿದ್ದ ಮಹಾರಾಣಿಯ ಕೊರಳಲ್ಲಿ ಜಗಜಗಿಸುತ್ತಿದ್ದ ಸೂರ್ಯ ಪ್ರಭಾವದ ಪದಕವನ್ನು ಕಂಡು ಅದನ್ನು ತಂದುಕೊಡುವಂತೆ ತನ್ನ ಪ್ರಿಯನನ್ನು ನಿರ್ಬಂಧ ಪಡಿಸಿದಳು. ಅಂಜನಚೋರ ಅರಮನೆಗೆ ಕನ್ನ ಹಾಕಿ, ಪದಕವನ್ನು ತರುತ್ತಿರಲಾಗಿ, ದಂಡಕನೆಂಬ ತಳಾರನಿಗೆ ಗೊತ್ತಾಗಿ, ಅವನು ಕಳ್ಳನನ್ನು ಬೆನ್ನಟ್ಟಿಕೊಂಡು ಹೋದನು. ಅಂಜನಚೋರ ಪದಕವನ್ನು ಬಿಸಾಡಿ, ಕೋಟೆಯನ್ನು ದಾಟಿ, ಶ್ಮಶಾನಕ್ಕೆ ಬಂದನು. ಅಲ್ಲಿ ವರಸೇನನೆಂಬುವನು ಗಗನಗಾಮಿನೀ ವಿದ್ಯೆಯನ್ನು ಸಾಧಿಸುವ ಸಲುವಾಗಿ ನೂರೊಂದು ಕಾಲುಗಳಿಂದ ದೀಪವುರಿ ಸುತ್ತ ಮೂವತ್ತೆರಡು ಆಯುಧಗಳನ್ನಿಟ್ಟು ಪೂಜಿಸುತ್ತ, ಅವುಗಳ ಮೇಲೆ ಬೀಳಲಾರದ ಭಯದಿಂದ ಮರದ ಕೊಂಬೆಗೆ ತೂಗುಹಾಕಿದ ನೆಲವಿನ ಮೇಲೆ ಹತ್ತಿ ಕೆಳಗಿಳಿಯುತ್ತಿದ್ದನು. ಲಲಿತಾಂಗ ವರಸೇನನನ್ನು ಹೆದರಿಸಿ ಜಿನದತ್ತ ಅವನಿಗೆ ಬೋಧಿಸಿದ್ದ ಮಂತ್ರವನ್ನು ಕಲಿತುಕೊಂಡು ತಳಾರನ ಕೈಯಲ್ಲಿ

ಸಾಯುವುದಕ್ಕಿಂತ ಆಯುಧಗಳ ಮೇಲೆ ಬಿದ್ದು ಸಾಯುವುದೊಳ್ಳೆಯ ದೆಂದು ಹಾರಿದನು. ಕೂಡಲೆ ವಿದ್ಯಾದೇವತೆ ಪ್ರತ್ಯಕ್ಷವಾಗಿ ಏನಪ್ಪಣೆ ಯೆಂದು ಕೇಳಿತು. ಜಿನದತ್ತನ ಬಳಿಗೆ ಕೊಂಡೊಯ್ಯುವುದೆಂದು ಅಂಜನ ಚೋರ ಆಜ್ಞಾಪಿಸಿದನು.

ಜಿನದತ್ತನ ಮುಂದೆ ನಿಂತ ಅಂಜನಚೋರ ಅವನಿಗೆ ನಮಸ್ಕರಿಸಿ, ಗಗನಗಾಮಿನೀ ವಿದ್ಯೆ ಅವನಿಗೆ ಬಂದ ಬಗೆಯನ್ನು ವಿವರಿಸುವಂತೆ ಕೇಳಿ ಕೊಂಡನು. ಆ ಸಂಬಂಧವಾದ ಕಥೆಯೊಂದನ್ನು ಜಿನದತ್ತ ನಿರೂಪಿಸಿದನು. ಜಿನಪದವೆಂಬ ದೇಶದಲ್ಲಿ ಭೂಮಿತಿಲಕವೆಂಬ ನಗರ; ಅದರ ದೊರೆ ನರಪಾಲ. ಅವನ ರಾಜಶ್ರೇಷ್ಠಿ ಸೌಂದರ; ಅವನ ಹೆಂಡತಿ ಸುನಂದೆ; ಅವರಿಬ್ಬರಿಗೂ ಶ್ರೀವರ್ಮ, ಜಯವರ್ಮ, ಧನ್ವಂತರಿ ಮುಂತಾದ ಎಂಟು ಜನ ಮಕ್ಕಳು. ರಾಜಪುರೋಹಿತನಾದ ಸೋಮಶರ್ಮನಿಗೂ ಅವನ ಹೆಂಡತಿ ಅಗ್ಗಿಲೆಗೂ ವಿಶ್ವಾನುಲೋಮನೆಂಬ ಮಗ. ಧನ್ವಂತರಿಯೂ ವಿಶ್ವಾನುಲೋಮನೂ ದುಷ್ಕಾರ್ಯ ಪ್ರವೃತ್ತರಾಗಿ ಮೆರೆಯುತ್ತ, ಅರಮನೆಯಲ್ಲಿ ಕಳವು ಮಾಡಿ, ತಳಾರರ ಕೈಗೆ ಸಿಕ್ಕು ಬಿದ್ದು, ಗಡೀಪಾರು ಶಿಕ್ಷೆಗೊಳಗಾಗಿ, ಪರದೇಶಕ್ಕೆ ಹೋದರು. ಗಜಪುರದಲ್ಲಿದ್ದಂದು ಒಂದು ದಿನ ಅವರಿಬ್ಬರೂ ಕೆರೆಗೆ ಹೋಗುತ್ತಿದ್ದಾಗ ಮದ್ದಾನೆ ಎದುರಾಯಿತು. ಅದನ್ನು ನೋಡಿ ಭಯ ಗೊಂಡು ಅವರು ಸಹಸ್ರಕೂಟ ಮಂಡಿತವೆಂಬ ಜಿನಾಲಯದಲ್ಲಿ ಹುದುಗಿ ಕೊಂಡರು. ಅಷ್ಟರಲ್ಲಿ ಮಳೆ ಬಂದು ಕತ್ತಲಾದದ್ದರಿಂದ ಅವರು ಅಲ್ಲೇ ಉಳಿಯಬೇಕಾಯಿತು.

ಆ ಜಿನಾಲಯದಲ್ಲಿ ಆ ರಾತ್ರಿ ವರಧರ್ಮರೆಂಬ ಮುನಿಗಳು ಧರ್ಮೋಪದೇಶಮಾಡುತ್ತಿದ್ದರು. ಆ ಉಪದೇಶ ಕಿವಿಗೆ ಬೀಳಬಾರದೆಂದು ಆ ಮಿತ್ರರು ಬಟ್ಟೆ ತುರುಕಿಕೊಂಡಿದ್ದರು. ವಿಶ್ವಾನುಲೋಮ ಮಲಗಿಕೊಂಡ ನಂತರ ಧನ್ವಂತರಿ ಕಿವಿಗೆ ತುರುಕಿಕೊಂಡಿದ್ದ ಬಟ್ಟೆಯನ್ನು ತೆಗೆದು ಉಪದೇಶ ಕೇಳತೊಡಗಿದನು. ಉಪದೇಶಾಂತ್ಯದಲ್ಲಿ ಅವನು ಋಷಿಗಳ ಬಳಿಸಾರಿ, ಪಾದಕ್ಕೆರಗಿ, ತನಗೊಂದು ವ್ರತವನ್ನು ದಯಪಾಲಿಸುವಂತೆ ಕೇಳಿಕೊಂಡನು. ತಲೆಯುವನನ್ನು ನೋಡದೆ ಯಾವೊತ್ತೂ ಉಣಬೇಡವೆಂದು ಮುನಿ ಗಳು ಉಪದೇಶಿಸಿದರು.

ಒಂದು ದಿನ ಊಟಕ್ಕೆ ಕುಳಿತಾಗ ವ್ರತದ ನೆನಪಾಯಿತು. ನೆರೆ ಮನೆಯ ಕುಂಬಾರನ ಬೋಳುದಲೆಯನ್ನಾದರೂ ನೋಡಿ ಬರುವುದೆಂದು ಯೋಚಿಸಿ, ಅವನ ಮನೆಗೆ ಹೋದನು. ಕುಂಬಾರ ಮನೆಯಲ್ಲಿರಲಿಲ್ಲ. ಅಲ್ಲಿಂದ ಮಣ್ಣಗೆಯುವ ಸ್ಥಳಕ್ಕೆ ನಡೆದು, ತಾನದನ್ನು ನೋಡಿದುದಾಗಿ ಕೂಗಿ ಕೊಂಡನು. ನಿಧಿಯನ್ನಗೆಯುತ್ತಿದ್ದ ಕುಂಬಾರ ತನ್ನ ರಹಸ್ಯಕರ್ಮ ಅವನಿಗೆ ಗೊತ್ತಾಯಿತೆಂದು ತಿಳಿದು, ನಿಧಿಯನ್ನು ಅವನ ಮುಂದಿಟ್ಟನು. ಧನ್ವಂತರಿ ಮತ್ತೊಂದು ದಿನ ಭಟ್ಟಾರಕರ ಬಳಿ ಹೋಗಿ, ಬೇರೊಂದು ವ್ರತ ಕೊಡು ವಂತೆ ಕೇಳಿಕೊಂಡನು. ಹೆಸರು ಗೊತ್ತಿಲ್ಲದ ಯಾವ ಮರದ ಹಣ್ಣನ್ನೂ ತಿನ್ನಬೇಡವೆಂದು ಅವರು ಬೋಧಿಸಿದರು. ಕೆಲವು ದಿನಗಳನಂತರ ಪರ ದೇಶಕ್ಕೆ ಹೋಗಿ ಸುಲಿಗೆ ಮಾಡಿಕೊಂಡು ಹಿಂದಿರುಗುವಾಗ, ದಾರಿಯಲ್ಲಿದ್ದ ಮರಗಳಿಂದ ಹಣ್ಣು ಕಿತ್ತು ತರುವಂತೆ ಧನ್ವಂತರಿ ಭೃತ್ಯರಿಗೆ ಅಪ್ಪಣೆ ಮಾಡಿ ದನು. ಅಷ್ಟರಲ್ಲಿ ವ್ರತ ನೆನಪಾಗಿ, ಹಣ್ಣಿನ ಹೆಸರು ಗೊತ್ತಿಲ್ಲವಾದ್ದರಿಂದ ಅವನು ತಿನ್ನಲಿಲ್ಲ. ಆದರೆ ಅವನ್ನು ತಿಂದ ಭೃತ್ಯರು ತೀರಿಕೊಂಡರು. ಹಾಗೆಯೇ ಮತ್ತೊಮ್ಮೆ ಭಟ್ಟಾರಕರು ಹಿಟ್ಟಿನ ಎತ್ತನ್ನೂ ಬಂಡಿಯನ್ನೂ ತಿನ್ನಬಾರದೆಂದು ಉಪದೇಶಿಸಿದರು. ಎಂದಿನಂತೆ ಕಾಡಿನಲ್ಲೊಂದು ಸಾರಿ ಅಲೆದಾಡುತ್ತಿದ್ದಾಗ ಹಸಿವಾದರೂ ಅವನು ಕಣ್ಣಿಗೆ ಬಿದ್ದ ಹಿಟ್ಟಿನ ಎತ್ತನ್ನು ತಿನ್ನಲಿಲ್ಲ. ಆದರೆ ಅದನ್ನು ತಿಂದ ಆಳುಗಳು ಕೂಡಲೆ ಸತ್ತುಹೋದರು. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಅಷ್ಟಮಿ ಚತುರ್ದಶಿಗಳಲ್ಲಿ ಮದ್ಯ ಮಾಂಸ ಗಳನ್ನು ಮುಟ್ಟಬಾರದೆಂದು ಭಟ್ಟಾರಕರು ಅವನಿಗೆ ನಾಲ್ಕನೆಯ ವ್ರತವನ್ನು ಉಪದೇಶಿಸಿದರು. ಕೆಲವು ದಿನಗಳನಂತರ ಪರದೇಶಕ್ಕೆ ಹೋಗಿ, ಕೊಳ್ಳೆ ಹೊಡೆದು ಹಿಂದಿರುಗುವಾಗ ದಾರಿಯ ಹಳ್ಳಿಯಲ್ಲಿ ತಂಗಬೇಕಾಯಿತು. ಮಾಂಸ ತರಲೆಂದು ಹೋದ ಆಳುಗಳು ಪರಸ್ಪರ ದ್ವೇಷಾಸೂಯೆಗಳಿಂದ ವಿಷ ಬೆರಸಿ ತಂದರು. ಅಂದು ಚತುರ್ದಶಿಯಾದ್ದರಿಂದ ಧನ್ವಂತರಿ ತಿನ್ನಲಿಲ್ಲ; ತಿಂದವರು ಸತ್ತು ಹೋದರು. ಯಾವ ಪ್ರಾಣಿಯ ಮೇಲಾದರೂ ಕೋಪ ಬಂದುದಾದರೆ, ಹಿಂದಕ್ಕೆ ಏಳು ಹೆಜ್ಜೆ ನಡೆದು, ಆಮೇಲೆ ಏನು ಬೇಕಾದರೂ ಮಾಡೆಂದು ಋಷಿಗಳು ಧನ್ವಂತರಿಗೆ ಐದನೆಯ ಬಾರಿಗೆ ಬೋಧಿಸಿದರು. ಎಷ್ಟೋ ದಿನಗಳನಂತರ ಅವನು ಕಳಿಂಗ ದೇಶಕ್ಕೆ ಹೋಗಿ, ದರೋಡೆ

ಮಾಡಿಕೊಂಡು ಹಿಂದಿರುಗಿ ಬಂದು, ಮನೆಯೊಳಗೆ ತಾಯಿ ಮಡದಿಯರು ಒಟ್ಟಿಗೆ ಮಲಗಿದ್ದುದನ್ನು ಕಂಡು, ಯಾರೋ ಪರಪುರುಷನೊಡನೆ ಹೆಂಡತಿ ಮಲಗಿರಬೇಕೆಂದು ನಿಶ್ಚಯಿಸಿ, ಕೋಪೋದ್ರೇಕದಿಂದ ಉರಿದು ಬಿದ್ದನು. ಗುರುಕೊಟ್ಟ ವ್ರತ ನೆನಪಾಗಿ ಏಳಡಿ ಹಿಂದಕ್ಕೆ ಸರಿದನು. ಆಗ ಹೆಂಡತಿ 'ಅತ್ತೆ, ಸೆಕೆ ಜಾಸ್ತಿಯಾಗಿದೆ, ದೂರ ಸರಿಯಿರಿ' ಎಂದಳು. ಆ ವ್ರತದ ದೆಸೆಯಿಂದ ಹೆಂಡತಿಯ ಕೊಲೆ ತಪ್ಪಿತು.

ಈ ವ್ರತಗಳ ಮಹಿಮೆಯನ್ನು ಅನುಭವಪೂರ್ವಕವಾಗಿ ಕಂಡ ಧನ್ವಂತರಿ ವರಧರ್ಮರ ಸಲಹೆಯಂತೆ ಧರಣಿಭೂಷಣಗಿರಿಗೆ ಹೋಗಿ ಧ್ಯಾನಸ್ಥನಾಗಿ ನಿಂತನು. ಅಲ್ಲಿಗೆ ಬಂದ ವಿಶ್ವಾನುಲೋಮ ಎಷ್ಟು ಮಾತಾಡಿಸಿದರೂ ಅವನು ಅಲುಗಾಡಲಿಲ್ಲ. ವಿಶ್ವಾನುಲೋಮನೂ ಹತ್ತಿರದಲ್ಲಿದ್ದ ಸಹಸ್ರಜಟಿಯೆಂಬ ತಾಪಸನ ಶಿಷ್ಯನಾಗಿ ತಪೋನಿರತನಾದನು. ಕೊನೆಗೆ ಧನ್ವಂತರಿ ದೇಹ ತೊರೆದು, ಅಚ್ಯುತಕಲ್ಪದಲ್ಲಿ ಅಮಿತಪ್ರಭನೆಂಬ ಅಹಮಿಂದ್ರನಾಗಿಯೂ, ವಿಶ್ವಾನುಲೋಮ ಮರಣ ಹೊಂದಿ ವ್ಯಂತರ ಲೋಕದಲ್ಲಿ ವಿದ್ಯುತ್ಪ್ರಭನೆಂಬ ವಾಹನ ದೇವನಾಗಿಯೂ ಜನಿಸಿದರು. ತಂತಮ್ಮ ಧರ್ಮವೇ ಮೇಲೆಂಬ ಸ್ಪರ್ಧಾಮನೋಭಾವ ಮತ್ತೆ ಅವರಲ್ಲಿ ತಲೆಯೆತ್ತಿತು. ಜಮದಗ್ನಿಯೆಂಬ ಕಠೋರ ತಪಸ್ವಿಯ ತಪಸ್ಸನ್ನು ಭಂಗಗೊಳಿಸಿ, ಅವನನ್ನು ಸಂಸಾರದಲ್ಲಿ ಪ್ರವೇಶಮಾಡಿಸಿ ಅಮಿತಪ್ರಭ ತನ್ನ ಶಕ್ತಿಯನ್ನು ಮೆರೆದನು. ಗೃಹಸ್ಥನ ತಪಸ್ಸನ್ನಾದರೂ ಕೆಡಿಸುವ ಶಕ್ತಿಯಿದೆಯೇ ಎಂದು ಅಮಿತಪ್ರಭ ಜಿನದತ್ತ ಸೆಟ್ಟಿಯನ್ನು ತೋರಿಸಲು, ವಾಹನದೇವ ದಿಙ್ಮೂಢನಾಗಿ ಮಿಥ್ಯಾಭಿಮಾನವನ್ನು ತೊರೆದು ಸದ್ದೃಷ್ಟಿಯಾದನು. ಅನಂತರ ಅಚ್ಯುತೇಂದ್ರನು ಜಿನದತ್ತನಿಗೆ ಗಗನಗಾಮಿನೀ ವಿದ್ಯೆಯನ್ನುಪದೇಶಿಸಿದನು.

ಈ ಕಥೆಯನ್ನು ಕೇಳಿದ ಲಲಿತಾಂಗ (ಅಂಜನ ಚೋರ) ಬೆರಗಾಗಿ, ದರ್ಶನದಲ್ಲಿ ನಿಶ್ಶಂಕನಾಗಿ, ಸಂಸಾರಕ್ಕೆ ಹೇಸಿ, ದೀಕ್ಷೆ ಪಡೆದು ತಪಸ್ಸುಮಾಡಿ ತ್ರಿಲೋಕ ಶಿಖರಿ ಶೇಖರನಾದನು.

### 3. ಅನಂತಮತಿಯ ಕಥೆ (ನಿಷ್ಕಾಂಕ್ಷೆ)

ಅಂಗದೇಶದ ಚಂಪಾಪುರದಲ್ಲಿ ಪ್ರಿಯದತ್ತನೆಂಬ ವರ್ತಕ; ಅವನಿಗೆ

ಅಂಗವುತಿಯೆಂಬ ಹೆಂಡತಿ, ಅನಂತವುತಿಯೆಂಬ ವುಗಳು. ಹುಡುಗರು ಹುಡುಗಾಟಿಕೆಗೆ ಅನಂತವುತಿಯ ಪಕ್ಕದಲ್ಲಿ ಬೊಂಬೆಯನ್ನಿಟ್ಟು ವುದುವೆ ಯಾಟ ಆಡುತ್ತಿದ್ದರು. ಬಸದಿಗೆ ಹೋಗುತ್ತಿದ್ದ ಪ್ರಿಯದತ್ತ ಆ ಆಟವನ್ನು ನೋಡಿ, ನೆಂಟರಿಷ್ಟರಿಲ್ಲದ ವುದುವೆ ಶೋಭಿಸದೆಂದು ಹೇಳಿ, ವುಗಳನ್ನು ಭಟ್ಟಾರಕರ ಬಳಿ ಕರೆದುಕೊಂಡುಹೋಗಿ, ಬ್ರಹ್ಮಚರ್ಯವ್ರತವನ್ನು ಕೊಡಿಸಿ ದನು. ಹೀಗಿರುವಾಗ ಅವಳಿಗೆ ಹನ್ನೆರಡು ವರ್ಷ ತುಂಬಿತು. ಒಂದು ದಿನ ಅವಳು ಉದ್ಯಾನದಲ್ಲಿ ಜೂನಾಲೆಯಾಡುತ್ತಿದ್ದಾಗ ಕುಂಡಲವುಂಡಿತನೆಂಬ ವಿದ್ಯಾಧರ ಅವಳನ್ನೆತ್ತಿಕೊಂಡು ಹೋದನು. ಅವಲೋಕಿನೀ ವಿದ್ಯೆಯ ಸಹಾಯದಿಂದ ಈ ವೃತ್ತಾಂತವನ್ನರಿತ ವಿದ್ಯಾಧರನ ಹೆಂಡತಿ ಸುಕೇಶಿ ಗಂಡ ನನ್ನಟ್ಟಿಸಿಕೊಂಡು ಬರಲು, ಅವನು ಪರ್ಣ ಲಘುವಿದ್ಯೆಯಿಂದ ಅನಂತವುತಿ ಯನ್ನು ಕಾಡಿನಲ್ಲಿಳಿಸಿದನು.

ಕರ್ಮವಶದಿಂದ ತನಗೆ ಪ್ರಾಪ್ತವಾದ ದುಃಖವನ್ನು ನೆನೆದು ಅನಂತ ಮತಿ ಬೇಯುತ್ತಿರುವಾಗ, ಬೇಡ ಪಡೆಯ ಯಜವಾನನೊಬ್ಬ ಅವಳ ಸವಾಚಾರವನ್ನು ಬೇಡರಿಂದ ತಿಳಿದು, ಕಾಡಿಗೆ ಬಂದು ತನ್ನನ್ನು ವುದುವೆ ಯಾಗುವಂತೆ ಕಾಡಿದನು. ಆವನು ಪೀಡಿಸಿದಂತೆಲ್ಲ ಅವಳ ವುನಸ್ಸು ಜಿನ ಪಾದಪದ್ಮಗಳಲ್ಲಿ ಬಲವಾಗಿ ಬೇರೂರಿತು. ಆಗ ನಗರಯಕ್ಷಿಗೆ ಆಸನ ಕಂಪ ವಾಗಿ, ಕಿರಾತವೇಷದಿಂದ ಬಂದು ಅನಂತವುತಿಯನ್ನು ಪರೀಕ್ಷಿಸಿ, ಅವಳ ದೃಢನಿಷ್ಠೆಯನ್ನು ಮೆಚ್ಚಿದಳು; ಅನಂತರ ಅವಳು ಅನಂತವುತಿಯ ರೂಪ ವನ್ನು ಧರಿಸಿ, 'ನಾನು ನಗರದೇವತೆ, ನನ್ನನ್ನು ಕಳಿಸದಿದ್ದರೆ ಅನಾಹುತ ವಾಗುತ್ತದೆ' ಎಂದು ಕಿರಾತರಾಜನನ್ನು ಹೆದರಿಸಿದಳು. ಅವನು ಅನಂತ ವುತಿಯನ್ನು ಪೂಜಿಸಿ, ವಂದಿಸಿ, ಅಯೋಧ್ಯೆಯ ದಾರಿಯನ್ನು ತೋರಿಸಿ, ಕಳುಹಿಸಿದನು.

ಅವಳು ಅಯೋಧ್ಯೆಯ ಬಸದಿಯಲ್ಲಿದ್ದಾಗ ಅಲ್ಲಿಯ ವರ್ತಕನಾದ ಪುಷ್ಪಕ ಅವಳು ದರ್ಶನ ವಿಶುದ್ಧಿಯೆಂದರಿತು, ಕರೆತಂದು ತನ್ನ ಹೆಂಡತಿಯ ಆಸರೆಗೊಪ್ಪಿಸಿದನು. ವಾತ್ಸಲ್ಯವುತಿಯಾದ ಹೆಂಡತಿ ಅವಳನ್ನು ವ್ಯಾಳಿ ಯೆಂಬ ಕುಂಟಣಿಗೆ ವಾರಿದಳು. ಅವಳನ್ನು ಕುವಾರ್ಗಕ್ಕೆಳೆಯಲಾರದೆ ವ್ಯಾಳಿ ಆ ಊರಿನ ರಾಜನಾದ ಸಿಂಹರಥನಿಗೊಪ್ಪಿಸಿದಳು. ತನ್ನ ವೋಹಕ್ಕೆ

ವಶವಾಗದಿದ್ದ ಅನಂತಮತಿಯನ್ನು ರಾಜ ಚಾವಟಿಯಿಂದ ಹೊಡೆಯಿಸಿದನು. ಆದರೆ ಅವಳು ಜಿನಭಜನೆಯಲ್ಲಿ ಮಗ್ನಳಾಗಿ, ಏಟಿನ ನೋವನ್ನೆಲ್ಲ ಸಹಿಸಿ ಕೊಂಡಳು. ಜಿನಭಕ್ತೆಯ ಸಂಕಟವನ್ನರಿತ ನಗರದೇವತೆಗಳು ಓಡೋಡಿ ಬಂದು, ಅವಳ ಯಾತನೆಯನ್ನೆಲ್ಲ ರಾಜನ ಕಡೆಗೂ, ಅವನ ಪರಿವಾರದ ಕಡೆಗೂ ತಿರುಗಿಸಿದರು. ಅನಂತಮತಿಯ ವ್ರತನಿಷ್ಠೆಯಿಂದ ಚಕಿತನಾದ ಸಿಂಹರಥ ಅವಳನ್ನು ಪೂಜಿಸಿ ಶ್ರಾವಕನಾದನು.

ಸಿಂಹರಥನ ರಾಜಶ್ರೇಷ್ಠಿ ಜಿನೇಂದ್ರದತ್ತ ಅನಂತಮತಿಯನ್ನು ಕರೆ ದೊಯ್ದು, ಮನೆಯಲ್ಲಿರಿಸಿಕೊಂಡನು. ಅವಳು ಕಮಲ ಶ್ರೀಗಂತಿಯರೊಡನೆ ಪರತತ್ತ್ವಗಳನ್ನು ವಿಚಾರಮಾಡುತ್ತ, ವ್ರತಾಚರಣೆ ಸತ್ಕಥಾ ಶ್ರವಣಗಳಲ್ಲಿ ಕಾಲಕಳೆಯುತ್ತಿದ್ದಳು. ಕೆಲವು ದಿನಗಳನಂತರ ಜಿನೇಂದ್ರದತ್ತನ ಮನೆಗೆ ಬಂದ ಪ್ರಿಯದತ್ತಸೆಟ್ಟಿ ಮಗಳನ್ನು ಕಂಡು ಹರ್ಷೋನ್ಮತ್ತನಾಗಿ, ಅವಳ ಯೋಗ ಕ್ಷೇಮವನ್ನು ವಿಚಾರಿಸಿ, ಅವಳಿಗೆ ಮದುವೆಮಾಡಬೇಕೆಂದು ಆಲೋಚಿಸಿದನು. ಅನಂತಮತಿ ಯಾರ ಮಾತಿಗೂ ಒಡಂಬಡದೆ, ಜಿನದೀಕ್ಷೆಯನ್ನು ಸ್ವೀಕರಿಸಿ ತಪಸ್ಸುಮಾಡಿ, ಸಮಾಧಿವಿಧಿಯಿಂದ ದೇಹತ್ಯಾಗಮಾಡಿ, ಹನ್ನೆರಡನೆಯ ಸಹಸ್ರಾರ ಕಲ್ಪದಲ್ಲಿ ಸುಕಾಂತನೆಂಬ ಮಹತ್ತರದೇವನಾಗಿ ಜನಿಸಿದಳು.

## 4. ಒದ್ದಾಯನನ ಕಥೆ (ನಿರ್ವಿಚಿಕಿತ್ಸೆ)

ಒಮ್ಮೆ ಸೌಧರ್ಮಕಲ್ಪದಲ್ಲಿ ಸೌಧರ್ಮೇಂದ್ರನಿಂದ ಪರಮ ಜಿನಾಗಮ ವನ್ನು ಕೇಳಿದ ಸುರರು 'ಈ ಕಲಿಕಾಲದಲ್ಲಿಯೂ ನಿರ್ವಿಚಿಕಿತ್ಸೆಯಲ್ಲಿ ಮನಸ್ಸು ನೆಟ್ಟ ಮಹಾಪುರುಷರಿದ್ದಾರೆಯೇ ?' ಎಂದು ಪ್ರಶ್ನಿಸಿದರು. ಆಗ ಸೌಧರ್ಮೇಂದ್ರ ಭರತಕ್ಷೇತ್ರದ ಇಂದ್ರಕಚ್ಛ ವಿಷಯದ ರೌರವಪುರದ ಒದ್ದಾಯನ ಮಹಾರಾಜನನ್ನು ಹೆಸರಿಸಿದನು. ಒಡ್ಡೋಲಗದಲ್ಲಿದ್ದ ವಾಸವ ನೆಂಬ ದೇವ ಆಶ್ಚರ್ಯಗೊಂಡು, ಸೌಧರ್ಮೇಂದ್ರನ ಮಾತನ್ನು ಪರೀಕ್ಷಿಸ ಬೇಕೆಂದು ಪ್ರತಿಜ್ಞೆ ಮಾಡಿದನು. ಕೂಡಲೆ ಋಷಿರೂಪದಿಂದ ಭರತಕ್ಷೇತ್ರಕ್ಕೆ ಬಂದು, ಬೀಭತ್ಸ ವೇಷದಿಂದ ಒದ್ದಾಯನನ ಒಡ್ಡೋಲಗವನ್ನು ಪ್ರವೇಶಿಸಿ ದನು. ಆ ಋಷಿಯ ಶರೀರದ ದುರ್ಗಂಧಕ್ಕೆ ಹೇಸಿದ ಜನ ಓಕರಿಸುತ್ತಿದ್ದರು. ಅವನನ್ನು ಕಂಡುದೆ ತಡ ಮಹಾರಾಜ ಸಿಂಹಾಸನದಿಂದಿಳಿದು, ನಮಸ್ಕರಿಸಿ,

ಅವನಿಗೆ ಕೈಗೊಟ್ಟು ಉಚ್ಚಾಸನದಲ್ಲಿ ಕುಳ್ಳಿರಿಸಿದನು. ಮಹಾರಾಣಿ ಪ್ರಭಾವತೀದೇವಿಯೂ ಋಷ್ಯಾಗಮನದಿಂದ ಸಂಪ್ರೀತೆಯಾದಳು.

ಸುತ್ತಮುತ್ತಲಿದ್ದ ಜನ ದುರ್ಗಂಧವನ್ನು ಸಹಿಸಲಾರದೆ ದೂರ ಸರಿದರೂ, ರಾಜರಾಣಿಯರು ಮಾತ್ರ ಋಷಿಗೆ ಭಕ್ಷ್ಯಭೋಜ್ಯಗಳನ್ನು ಬಡಿಸಿ ಸಂತೋಷಪಡಿಸುತ್ತಿದ್ದರು. ತುಸು ಹೊತ್ತಿನಲ್ಲಿಯೇ ಋಷಿ ತಿಂದಿದ್ದ ಆಹಾರವನ್ನೆಲ್ಲ ಬಳಿಯಲ್ಲಿ ಕುಳಿತಿದ್ದ ರಾಜನ ಮೇಲೆ ವಮನ ಮಾಡಿ ಬಿಟ್ಟನು. ವಮನದ ಲೋಳೆ ರಾಜನ ಮೈಗೆ ವಜ್ರಲೇಪದಂತೆ ಅಂಟಿ ಕೊಂಡಿತು. ರಾಜರಾಣಿಯರು ಸ್ವಲ್ಪವೂ ಅಸಹ್ಯಪಟ್ಟುಕೊಳ್ಳದೆ ಮುನಿಯ ಮೈಯನ್ನು ತೊಳೆದು, ಪೀತಾಂಬರದಿಂದ ಒರಸಿ, ತೂಗುಮಂಚದಲ್ಲಿ ಕುಳ್ಳಿರಿಸಿ, ಗಾಳಿ ಹಾಕತೊಡಗಿದರು. ಆಯಾಸ ಕಳೆದು, ಋಷಿ ಕಣ್ಣು ಬಿಟ್ಟಕೂಡಲೆ, ರಾಜರಾಣಿಯರು ತಮ್ಮಿಂದಾದ ತೊಂದರೆಗಾಗಿ ಕ್ಷಮೆ ಕೇಳಿದರು. ಆಗ ವಾಸವ ನಿಜ ಸ್ವರೂಪವನ್ನು ತೋರಿಸಿ, ತಾನು ಬಂದ ಉದ್ದೇಶವನ್ನು ತಿಳಿಸಿ, ಪ್ರಭಾವತಿಯ ಮಾಹಾತ್ಮ್ಯವನ್ನು ನಿರೂಪಿಸಿದನು.

ನಾರಾಯಣದತ್ತೆಯೆಂಬುವಳು ಪ್ರಭಾವತಿಯ ಬಾಲ್ಯ ಸ್ನೇಹಿತೆ. ಬಾಲ್ಯದಲ್ಲಿಯೇ ವಿಧವೆಯಾದದ್ದರಿಂದ ತರ್ಕಶಾಸ್ತ್ರ ಪಾರಂಗತಳಾಗಿ, ಪಂಡಿತೆ ಯೆಂಬ ಹೆಮ್ಮೆಯಿಂದ ಬೀಗುತ್ತಿದ್ದಳು. ಪ್ರಭಾವತೀದೇವಿ ಅವಳ ಮಿಥ್ಯಾ ವೇಷವನ್ನು ನೋಡಿ ನಿರ್ಲಕ್ಷ್ಯದಿಂದಿದ್ದಳು. ನಾರಾಯಣದತ್ತೆ ಮನಸ್ಸಿನಲ್ಲಿ ಕುದಿಯುತ್ತ, ಸೇಡು ತೀರಿಸಿಕೊಳ್ಳಬೇಕೆಂದು ಹಠತೊಟ್ಟು, ರಾಣಿಯ ಚಿತ್ರ ಪಠವೊಂದನ್ನು ತಂದು ಮಾಳವೇಶ್ವರನಾದ ಚಂಡದ್ಯೋತನಿಗೆ ತೋರಿಸಿ ಅವಳ ರೂಪವೈಭವವನ್ನು ಬಗೆಬಗೆಯಾಗಿ ವರ್ಣಿಸಿದಳು. ಒದ್ದಾಯನ ದೊರೆ ಊರಲ್ಲಿಲ್ಲದಾಗ ಚಂಡದ್ಯೋತ ಸೈನ್ಯಸಮೇತನಾಗಿ ರೌರವಪುರವನ್ನು ಮುತ್ತಿ, ರಾಣಿಯನ್ನು ವಶಪಡಿಸಿಕೊಳ್ಳಲನುವಾದನು. ಆಗ ನಂದೀಶ್ವರ ದ್ವೀಪಕ್ಕೆ ಹೋಗುತ್ತಿದ್ದ ನಾನು ಚಂಡದ್ಯೋತನ ಸೈನ್ಯವನ್ನೆಲ್ಲ ಉಜ್ಜಯಿನಿ ಯಲ್ಲಿಳಿಸಿದೆನು. ಪರೀಕ್ಷಾರ್ಥವಾಗಿ ಮಾಯಾಸೈನ್ಯವನ್ನು ಸೃಷ್ಟಿಸಿ, ಚಂಡ ದ್ಯೋತನ ವೇಷವನ್ನು ಧರಿಸಿ ಪ್ರಭಾವತಿಯ ಬಳಿ ಸಾರಿ 'ಪಟ್ಟಣ ಹಾಳಾಗಿದೆ; ನಿನ್ನ ಗಂಡ ಸೆರೆಯಾಗಿದ್ದಾನೆ. ನೀನು ನನ್ನವಳಾಗು' ಎಂದು ಬೆದರಿಕೆ ಹಾಕಿದೆ. ಆದರೆ ಜಿನಧ್ಯಾನದಲ್ಲಿ ಮಗ್ನಳಾದ ರಾಣಿ ತುಟಿಪಿಟಕ್ಕೆನ್ನ

ಲಿಲ್ಲ; ಅವಳ ಸ್ಥೈರ್ಯ ಅಲುಗಲಿಲ್ಲ. ಅನಂತರ ನನ್ನ ನಿಜರೂಪವನ್ನು ತೋರಿಸಿ, ಶೀಲವತಿಯೆಂಬ ಬಿರುದನ್ನು ಕೊಟ್ಟು ದೇವಲೋಕಕ್ಕೆ ಹೋದೆನು.

ಕಥೆ ಹೇಳಿ ಮುಗಿಸಿದನಂತರ ವಾಸವದೇವ ರಾಜರಾಣಿಯರನ್ನು ರತ್ನ ಸಿಂಹಾಸನದಲ್ಲಿ ಕುಳ್ಳಿರಿಸಿ, ನಾನಾವಿಧಾರ್ಚನೆಗಳಿಂದ ತೃಪ್ತಿಪಡಿಸಿ, ಸೌಧರ್ಮಕಲ್ಪಕ್ಕೆ ತೆರಳಿದನು. ಹಲವು ಕಾಲ ರಾಜ್ಯವಾಳಿದನಂತರ ರಾಜ ರಾಣಿಯರು ವೈರಾಗ್ಯ ತಳೆದು, ಘೋರತಪಸ್ಸನ್ನಾಚರಿಸಿ, ಸದ್ಗತಿಯನ್ನು ಪಡೆದರು.

## 5. ರೇವತಿ ರಾಣಿಯ ಕಥೆ (ಅಮೂಢದೃಷ್ಟಿ)

ವಿಜಯಾರ್ಧ ಪರ್ವತದ ದಕ್ಷಿಣ ಭಾಗದಲ್ಲಿ ಮೇಘಕೂಟವೆಂಬ ಪರ್ವತ. ಆ ಪರ್ವತದಲ್ಲಿ ಚಂದ್ರಾಭನೆಂಬ ಖೇಚರ ಸುಮತಿಯೆಂಬ ರಾಣಿ ಯೊಡನೆ ಸುಖಸಂತೋಷದಿಂದಿದ್ದನು. ಒಂದು ದಿನ ದೊರೆ ಮೇಘ ರಾಶಿಯ ರೂಪಪರಿವರ್ತನೆಯನ್ನು ಕಂಡು, ಸಂಸಾರದ ಅನಿತ್ಯತೆಯನ್ನು ನೆನೆದು, ತಪಸ್ಸಿನಿಂದ ಮುಕ್ತಿಶ್ರೀಯನ್ನೊಲಿಸಿಕೊಳ್ಳುವ ಬಯಕೆಯಿಂದ, ಮಗ ಚಂದ್ರಶೇಖರನಿಗೆ ರಾಜ್ಯವನ್ನೊಪ್ಪಿಸಲಣಿಯಾದನು. ತನಗೆ ರಾಜ್ಯಶ್ರೀ ಬೇಡವೆಂದೂ, ಮುಕ್ತಿಶ್ರೀಯೆ ಸಾಕೆಂದೂ ಮಗ ಉತ್ತರಿಸಿದನು. ಹೇಗೋ ದೊರೆ ಮಗನನ್ನೊಪ್ಪಿಸಿ, ಪಟ್ಟಕಟ್ಟಿ, ವಿಮಾನಾರೂಢನಾಗಿ ಪಾಂಡ್ಯದೇಶದ ದಕ್ಷಿಣ ಮಧುರೆಗೆ ತೆರಳಿದನು. ಅಲ್ಲಿಯ ಜಿನಾಲಯಗಳನ್ನು ನೋಡಿ ವಂದಿಸುತ್ತ ಮುಂದುವರಿಯುತ್ತಿದ್ದಾಗ, ಪಾಂಡ್ಯಭೂಪತಿ ಚಿತ್ರವಾಹನ ಮಹಾರಾಜ ಪರಿವಾರ ಸಮೇತನಾಗಿ ಜಿನಮಂದಿರಕ್ಕೆ ಬಂದು, ಭಕ್ತಿಯಿಂದ ಪೂಜಿಸಿ, ಅರಮನೆಗೆ ಹಿಂದಿರುಗಿದನು. ಚಂದ್ರಾಭ ಪಾಂಡ್ಯ ಭೂಪತಿಯ ನೇಮನಿಷ್ಠೆಗಳನ್ನು ಕಂಡು ತಲೆದೂಗಿ, ಮುನಿಗುಪ್ತ ಭಟ್ಟಾರಕರನ್ನು ಕಂಡು ವಂದಿಸಿ, ತನಗೆ ತಪೋಮಾರ್ಗವನ್ನು ತೋರಿಸುವಂತೆ ಪ್ರಾರ್ಥಿಸಿದನು. ಭಟ್ಟಾರಕರು ತಪಸ್ಸಿನ ಕಷ್ಟನಿಷ್ಠುರಗಳನ್ನು ವರ್ಣಿಸಿ, ವಿದ್ಯಾಧರ ರಾಜ್ಯಕ್ಕೆ ಹಿಂದಿರುಗಿ ಸುಖವಾಗಿರುವಂತೆ ಹೇಳಿದರು. ಎಷ್ಟು ಹೇಳಿದರೂ ಚಂದ್ರಾಭನ ಮನಸ್ಸು ಕದಲಲಿಲ್ಲ. ಅವನ ವೈರಾಗ್ಯ ಪರತೆಯನ್ನು ಪರೀಕ್ಷಿಸಿ ಮೆಚ್ಚಿದ ಮುನಿಗುಪ್ತರು ಮನಸ್ಸಿನ ಪರಿಗ್ರಹಗಳನ್ನೆಲ್ಲ ತೊರೆಯುವಂತೆ ಸೂಚಿಸಿದರು.

ಚಂದ್ರಾಭ ಸಕಲ ಪರಿಗ್ರಹಗಳನ್ನು ತ್ಯಜಿಸಿ, ಮೇರು ಪರ್ವತದ ಜಿನಾಲಯಗಳನ್ನು ನೋಡುವ ಬಯಕೆಯಿಂದ ಗಗನ ಚಾರಿಣಿ ವಿದ್ಯೆಯೊಂದನ್ನು ಮಾತ್ರ ಉಳಿಸಿಕೊಂಡನು. ಆಗ ಭಟ್ಟಾರಕರು ಮಹಾವ್ರತಗಳ ಚಿಂತೆ ಬೇಡವೆಂದೂ, ಹನ್ನೊಂದನೆಯ ಶ್ರಾವಕ ವ್ರತವಾದ ಉದ್ದಿಷ್ಟ ವಿರತಿಯನ್ನು ಕೈಗೊಳ್ಳಬಹುದೆಂದೂ ತಿಳಿಸಿದರು. ಚಂದ್ರಾಭ ಅದೇ ರೀತಿ ವ್ರತವನ್ನು ಸ್ವೀಕರಿಸಿ ಗುರುಸೇವೆಯಲ್ಲಿ ತೊಡಗಿದನು.

ಒಮ್ಮೆ ಚಂದ್ರಾಭ ಉತ್ತರ ಮಥುರೆಯ ಜಿನಾಲಯಗಳನ್ನು ನೋಡುವ ಸಲುವಾಗಿ ಪ್ರಯಾಣ ಸನ್ನದ್ಧನಾದನು. ವರುಣ ಮಹಾರಾಜನ ಹೆಂಡತಿ ರೇವತಿಗೆ ತನ್ನ ಆಶೀರ್ವಾದವನ್ನೂ, ಉಂಡುರುಳಿ ಭಟ್ಟಾರಕರಿಗೆ ತನ್ನ ವಂದನೆಯನ್ನೂ ಮುಟ್ಟಿಸುವಂತೆ ಮುನಿಗುಪ್ತರು ಚಂದ್ರಾಭನಿಗೆ ತಿಳಿಸಿ, ಕಳಿಸಿಕೊಟ್ಟರು. ಚಂದ್ರಾಭ ವಿದ್ಯಾಬಲದಿಂದ ಉತ್ತರ ಮಥುರೆಯನ್ನು ಸೇರಿ, ಭವಸೇನಾಚಾರ್ಯರ ಅಪರಿಪಕ್ವತೆಯನ್ನು ಕಂಡು ನಾನಾರೀತಿಯಿಂದ ಉಂಡುರುಳಿ ಭಟ್ಟಾಕರನ್ನು ಪರೀಕ್ಷಿಸಿ ಮೆಚ್ಚಿ ಹರಕೆಗೊಂಡು ರೇವತಿ ಮಹಾದೇವಿಯನ್ನು ಪರೀಕ್ಷಿಸುವ ಸಲುವಾಗಿ ಚತುರ್ಮುಖಬ್ರಹ್ಮನ ವೇಷವನ್ನು ಧರಿಸಿ ನಗರದ ಪೂರ್ವದಿಕ್ಕಿನ ಉದ್ಯಾನದಲ್ಲಿ ನಿಂತನು. ಬ್ರಹ್ಮದರ್ಶನಕ್ಕೆ ಹೋಗುವುದೆಂದು ವರುಣ ಮಹಾರಾಜ ಹೆಂಡತಿಗೆ ಸೂಚಿಸಲು "ಅದು ಖೇಚರನ ಮಾಯೆ; ಆದಿಬ್ರಹ್ಮನಾದ ಪ್ರಥಮ ತೀರ್ಥೇಶ್ವರರು ಎಂದೋ ಮೋಕ್ಷ ಹೊಂದಿದರು" ಎಂದವಳು ನುಡಿದು ತೆಪ್ಪಗಾದಳು. ಅನಂತರ ಚಂದ್ರಾಭ ಕ್ರಮವಾಗಿ ವಿಷ್ಣುಶಿವರ ವೇಷ ಧರಿಸಿ ನಿಂತನು. ಆಗಲೂ ರೇವತೀದೇವಿ ಅವು ಕೃತಕ ವೇಷಗಳೆಂದೇ ಅಲ್ಲಗಳೆದಳು. ಕೊನೆಗೆ ಚಂದ್ರಾಭ ವರ್ಧಮಾನಸ್ವಾಮಿಯ ವೇಷವನ್ನು ಧರಿಸಿ ಉತ್ತರದಿಕ್ಕಿನ ಉಪವನದಲ್ಲಿ ಕಾಣಿಸಿಕೊಂಡನು. "ಇಪ್ಪತ್ತು ನಾಲ್ಕು ಮಂದಿ ತೀರ್ಥಂಕರರೂ ಮುಕ್ತಿಶ್ರೀಯನ್ನು ಕೂಡಿಕೊಂಡಿರುವಾಗ ಅವರು ಮತ್ತೆ ಈ ಭೂಮಿಗೆಂತು ಬಂದಾರು? ಈ ಊರವರು ದೈವವಿಮೂಢತೆ, ಲೋಕ ವಿಮೂಢತೆ, ಸಮಯ ವಿಮೂಢತೆಗಳಿಗೆ ಸೆರೆಯಾಗಿ ಈ ವೇಷಧಾರಿಗಳನ್ನು ಪೂಜಿಸುತ್ತಿದ್ದಾರೆ" ಎಂದು ರೇವತಿ ಗಂಡನಿಗೆ ಧರ್ಮರಹಸ್ಯವನ್ನು ತಿಳಿಸಿ, ಮೌನಿಯಾದಳು. ಚಂದ್ರಾಭ ಅವಳ ದೃಢತೆಯನ್ನು ಮೆಚ್ಚಿ, ಕೃತಕ ವೇಷವನ್ನು

ತೊರೆದು, ತನ್ನ ವೃತ್ತಾಂತವನ್ನೂ, ಮುನಿಗುಪ್ತರ ಆಶೀರ್ವಾದವನ್ನೂ ತಿಳಿಸಿ ಜಿನಾಲಯಗಳನ್ನು ಸಂದರ್ಶಿಸಿ, ದಕ್ಷಿಣ ಮಧುರೆಗೆ ಹಿಂದಿರುಗಿದನು.

ವರುಣ ಮಹಾರಾಜ ತನ್ನ ಮಡದಿಯ ಶ್ರಾವಕತ್ವಕ್ಕೆ ಮಾರು ಹೋಗಿ ಮೂಢತ್ರಯವನ್ನು ತೊರೆದು, ಜ್ಯೇಷ್ಠಪುತ್ರನಿಗೆ ರಾಜ್ಯವನ್ನು ವಹಿಸಿ, ದೀಕ್ಷೆ ಪಡೆದನು. ರೇವತಿ ಮಹಾದೇವಿಯೂ ಸುವ್ರತಕಂತಿಯರಲ್ಲಿ ದೀಕ್ಷೆ ಪಡೆದು, ಏಕಾದಶಾಂಗಧಾರಿಣಿಯಾಗಿ ತಪಸ್ಸು ಮಾಡಿದಳು. ದಕ್ಷಿಣಮಧುರೆಯನ್ನು ನೋಡಬೇಕೆಂಬ ಹಂಬಲದಿಂದ ಅವಳು ಕರಹಾಟನಗರವನ್ನು ತಲಪುವ ವೇಳೆಗೆ ದೇಹಾಲಸ್ಯದಿಂದ ಕಂದಿ ಕುಂದಿದಳು. ತನಗೆ ಅವಸಾನ ಸಮಿಾಪಿಸಿದು ದನ್ನು ಕಂಡು, ಸನ್ಯಾಸವನ್ನು ಸ್ವೀಕರಿಸಿ, ಸಮಾಧಿಮರಣದಿಂದ, ದೇಹತ್ಯಾಗ ಮಾಡಿ ಹದಿನಾರನೆಯ ಅಚ್ಯುತಕಲ್ಪದಲ್ಲಿ ಮಹರ್ಧಿಕದೇವನಾಗಿ ಹುಟ್ಟಿದಳು.

## 6. ಜಿನೇಂದ್ರಭಕ್ತನ ಕಥೆ (ಉಪಗೂಹನ)

ಮಗಧದೇಶದ ಪಾಟಲೀಪುತ್ರದಲ್ಲಿ ವೀರಧ್ವಜನೆಂಬ ದೊರೆ ಸುಸೀಮೆ ಯೆಂಬ ಹೆಂಡತಿಯೊಡನೆ ರಾಜ್ಯವಾಳುತ್ತಿದ್ದನು. ಅವನ ಮುದ್ದು ಮಗ ವೀರಕುಮಾರ ಕಳ್ಳಕಾಕರ ಗುಂಪಿನಲ್ಲಿ ಸೇರಿಕೊಂಡು ದುರ್ವ್ಯಾಪಾರಪ್ರವೃತ್ತ ನಾಗಿದ್ದನು. ಒಂದು ದಿನ ಕಳ್ಳರ ಗುರಿಕಾರ ರಾಜಕುಮಾರನನ್ನು ಕುರಿತು 'ಒಡೆಯ, ನಾನು ಮಾಡದ ಸಾಹಸವಿಲ್ಲ, ಕದ್ದು ತರದ ವಸ್ತುವಿಲ್ಲ. ಆದರೆ ಕಾಮಲಿಪ್ತಿಪುರದ ಜಿನೇಂದ್ರಭಕ್ತನ ದೇಹಾರದಲ್ಲಿರುವ ಮುಕ್ಕೊಡೆಯ ರತ್ನ ವನ್ನು ಅಪಹರಿಸಲು ಸಾಧ್ಯವಾಗಿಲ್ಲ. ಆ ರತ್ನಕ್ಕೆ ಮೂರು ಲೋಕಗಳೂ ಸಾಟಿಯಾಗಲಾರವು' ಎಂದನು. ಆ ರತ್ನವನ್ನು ತಂದುಕೊಟ್ಟವರಿಗೆ ತನ್ನ ರಾಜ್ಯದಲ್ಲಿ ಅರ್ಧ ಭಾಗವನ್ನು ಹಂಚಿಕೊಡುವುದಾಗಿ ರಾಜಕುಮಾರ ವಾಗ್ದಾನ ಮಾಡಿದನು. ಆಗ ಸೂರ್ಪನೆಂಬ ಚೋರಶಿಖಾಮಣಿ ಕೈ ಜೋಡಿಸಿ ನಿಂದು, ಆ ರತ್ನವನ್ನು ತಂದೊಪ್ಪಿಸುವುದಾಗಿ ಪ್ರತಿಜ್ಞೆ ಮಾಡಿದನು.

ಪಾಟಲೀ ಪುತ್ರದಿಂದ ಹೊರಟಿದ್ದ ಸೂರ್ಪ ಪೂರ್ವದಿಕ್ಕಿನ ಕಡೆ ಪ್ರಯಾಣ ಬೆಳಸಿ, ದಾರಿಯ ಬಸದಿಯಲ್ಲಿದ್ದ ಋಷಿಗಳೊಡನೆ ಕಲೆತು, ಅವರ ರೀತಿನೀತಿಗಳನ್ನು ಕಲಿತುಕೊಂಡು, ತಲೆ ಬೋಳಿಸಿ, ಬ್ರಹ್ಮಚಾರಿ ವೇಷವನ್ನು ಧರಿಸಿ, ಊರೂರು ಸುತ್ತಿದನು. ಅವನು ಹೋದೆಡೆಯಲ್ಲೆಲ್ಲ

ಪೂಜೆ ಪುರಸ್ಕಾರಗಳು ದೊರೆತು ಪ್ರಸಿದ್ಧಿಯಾದನು. ಕಾಮಲಿಪ್ತಿಪುರದ ಬಹಿರುದ್ಯಾನದಲ್ಲಿ ಬಂದು ನೆಲಸಿದ ಕಪಟ ಋಷಿಯನ್ನು ಮಹರ್ಷಿಯೆಂದೇ ಭಾವಿಸಿ ಜಿನೇಂದ್ರಭಕ್ತ ತನ್ನ ಮನೆಗೆ ಕರೆದುಕೊಂಡು ಬಂದು ದೇಹಾರದಲ್ಲಿರಿಸಿದನು.

ಒಂದು ದಿನ ಜಿನೇಂದ್ರದತ್ತ ವ್ಯಾಪಾರಕ್ಕೆಂದು ಪರದೇಶಕ್ಕೆ ಹೊರಡಲುದ್ಯುಕ್ತನಾಗಿ ಊರಹೊರಗೆ ಬೀಡುಬಿಟ್ಟನು. ತನ್ನ ಚೋರ ಕಾರ್ಯಕ್ಕೆ ಅದೇ ಸುಸಮಯವೆಂದು ಭಾವಿಸಿದ ಮಾಯಾ ಮುನಿ ಕಾವಲಿನವರು ಗಾಢ ನಿದ್ರೆಯಲ್ಲಿದ್ದಾಗ ಮುಕ್ಕೊಡೆಯ ರತ್ನವನ್ನು ಕಳಚಿಕೊಂಡು ಹೊರಗೆ ನುಸುಳಿದನು. ಬಾಲಾರ್ಕನಂತೆ ಪ್ರಜ್ವಲಿಸುತ್ತಿದ್ದ ರತ್ನವನ್ನು ಕಂಡು ತಳವಾರರು ಗದ್ದಲಮಾಡಿದರು. ತಾನವರಿಗೆ ಸಿಕ್ಕುಬಿದ್ದರೆ ಚಾಟಿಯ ಏಟು ತಿನ್ನಬೇಕಾದೀತೆಂಬ ಭೀತಿಯಿಂದ ಅವನು ಊರ ಹೊರಗಿನ ಸೆಟ್ಟಿಯ ಬಿಡಾರವನ್ನು ಪ್ರವೇಶಿಸಿದನು. ಸೆಟ್ಟಿಗೆ ಮಾಯಾಮುನಿಯ ಕಪಟತನ ಪ್ರಕಟವಾಯಿತು. ಆದರೂ ಸ್ವಧರ್ಮನಿರತನಾದ ಆವನು ಸೂರ್ಪನನ್ನು ಪೀಠದ ಮೇಲೆ ಕುಳ್ಳಿರಿಸಿ ಅವನ ಕಾಲನ್ನೊತ್ತುತ್ತಿದ್ದನು. ಇವನು ಕಳ್ಳನಾಗಿದ್ದರೆ ಕದ್ದ ಮಾಲಿನೊಡನೆ ನನ್ನೆಡೆಗೆ ಬರುತ್ತಿದ್ದನೆ ಎಂದು ಕಳ್ಳನನ್ನು ಬೆನ್ನಟ್ಟಿಕೊಂಡು ಬಂದ ತಳಾರರನ್ನು ಹಿಂದಿರುಗಿಸಿ, ಸೂರ್ಪನನ್ನು ರಹಸ್ಯ ಸ್ಥಳಕ್ಕೆ ಕರೆದೊಯ್ದು ಧರ್ಮಾಧರ್ಮ ಸ್ವರೂಪವನ್ನೂ ಆದರ ಫಲಗಳನ್ನೂ ನಿರೂಪಿಸಿದನು. ಸೂರ್ಪನಿಗೆ ಜ್ಞಾನೋದಯವಾಗಿ ವೈರಾಗ್ಯ ಪ್ರಾಪ್ತವಾಗಿ ಜಿನದೀಕ್ಷೆಯನ್ನು ಕೈಕೊಂಡನು. ಕೊನೆಗೆ ಸಮಾಧಿ ಮರಣದಿಂದ ಅವನಿಗೆ ದೇವಗತಿ ಸಮನಿಸಿತು.

## 7. ವಾರಿಷೇಣನ ಕಥೆ (ಸ್ಥಿತಿಕರಣ)

ವಾರಿಷೇಣ ಶ್ರೇಣಿಕ ಮಹಾರಾಜ ಮತ್ತು ಚೇಳಿನಿದೇವಿಯರ ಮಗ. ಅವನು ಜನ್ಮಾರಭ್ಯ ಪರಮಶ್ರಾವಕನಾಗಿ ಜಿನಮುನಿಗಳ ಪಾದಸೇವೆಯಲ್ಲಿ ನಿರತನಾಗಿದ್ದನು. ಒಂದು ದಿನ ಮುಂಡಿಯ ಪುತ್ರಾಚಾರ್ಯರೆಂಬ ಆಚಾರ್ಯರು ಅಯೋಧ್ಯೆಯ ಪೂರ್ವದಿಕ್ಕಿನಲ್ಲಿದ್ದ ಬಲಾಹಕ ಪರ್ವತದಲ್ಲಿ ಬಂದು ತಂಗಿದರು.ವಾರಿಷೇಣ ಆಚಾರ್ಯರ ಬಳಿ ಸಾರಿ ಅವರನ್ನು ಶುಶ್ರೂಷೆಯಿಂದ

ತೃಪ್ತಿಪಡಿಸಿ, ಧರ್ಮಸೂಕ್ಷ್ಮವನ್ನರಿತು, ಚತುರ್ದಶಿಯಾದದ್ದರಿಂದ ಉಪವಾಸ ಮಾಡಿ, ರಾತ್ರಿ ಶ್ಮಶಾನ ಭೂಮಿಗೆ ನಡೆದು ಪ್ರತಿಮಾಯೋಗದಲ್ಲಿ ನಿಂತನು.

ಆ ರಾತ್ರಿ ಮೃಗವೇಗನೆಂಬ ಕಳ್ಳ ರಾಜಶ್ರೇಷ್ಠಿಯ ಪತ್ನಿಯಾದ ಕೀರ್ತಿಮತಿಯ ರತ್ನಹಾರವನ್ನು ಕದ್ದುಕೊಂಡು ಶ್ಮಶಾನಮಾರ್ಗವಾಗಿ ಓಡಿ ಹೋಗುತ್ತಿದ್ದನು. ಹಿಂದೆ ಬೆನ್ನಟ್ಟಿ ಬರುತ್ತಿದ್ದ ತಳವಾರರಿಗೆ ಹೆದರಿದ ಕಳ್ಳ ಆ ಹಾರವನ್ನು ವಾರಿಷೇಣನ ಮುಂದೆ ಬಿಸಾಡಿ ತಲೆ ತಪ್ಪಿಸಿಕೊಂಡನು. ತಳಾರರಿಂದ ವಾರಿಷೇಣನೇ ಕಳ್ಳನೆಂದು ತಿಳಿದಾಗ, ಶ್ರೇಣಿಕ ಮಹಾರಾಜ ಅವನಿಗೆ ಮರಣದಂಡನೆ ವಿಧಿಸಿದನು. ತಳವಾರರು ರಾಜಕುಮಾರನನ್ನು ನಾನಾ ವಿಧವಾಗಿ ಮೂದಲಿಸಿದರೂ ಅವನು ಪರಮಾತ್ಮಧ್ಯಾನದಲ್ಲಿ ಮಗ್ನನಾಗಿದ್ದನು. ಕೊನೆಗೆ ಹಲವು ಬಗೆಯ ಚಿತ್ರಹಿಂಸೆಗಳಿಂದ ಅವನನ್ನು ಪೀಡಿಸಿದರು. ತಳಾರರ ಕತ್ತಿಯ ಪೆಟ್ಟು ಕುಮಾರನ ಕೊರಳಿನಲ್ಲಿ ಬಿದ್ದುದೇ ತಡ ಜಗಜಗಿಸುವ ಹಾರ ಮೂಡಿತು. ಅವರ ಏಟುಗಳೆಲ್ಲ ಒಡವೆಗಳಾಗಿ ಪರಿಣಮಿಸಿದುವು. ಆ ಸುದ್ದಿಯನ್ನು ಕೇಳಿದ ಶ್ರೇಣಿಕ ಮಹಾರಾಜ ಪರಿವಾರ ಸಮೇತನಾಗಿ ಶ್ಮಶಾನಕ್ಕೆ ತೆರಳಿ ರತ್ನ ಸಿಂಹಾಸನದಲ್ಲಿ ದೇವತೆಗಳಿಂದ ಪೂಜೆಗೊಳ್ಳುತ್ತಿದ್ದ ಕುಮಾರನನ್ನು ನೋಡಿ, ಆನಂದಭರಿತನಾಗಿ ತಾನೂ ಪೂಜಿಸಿದನು. ಬೆಳಗಾಗುವ ಹೊತ್ತಿಗೆ ಯೋಗಸಮಾಧಿಯಿಂದೆದ್ದು ವಾರಿಷೇಣ ಅರಮನೆಗೆ ಹೊರಟನು. ಕೊನೆಗೊಂದು ದಿನ ವಾರಿಷೇಣ ಸಂಸಾರದ ಅನಿತ್ಯತೆಯನ್ನು ನೆನೆದು, ಪತ್ನಿಮಾತೆಯರನ್ನು ತೊರೆದು, ಪುಷ್ಪಗಿರಿ ಪರ್ವತಕ್ಕೆ ಹೋಗಿ ಸುರೇಂದ್ರಾಚಾರ್ಯರಿಂದ ದೀಕ್ಷೆ ಪಡೆದು, ತಪಸ್ಸು ಮಾಡಿ, ಸಿದ್ಧಿ ಪಡೆದನು.

ಹೀಗಿರುವಾಗ ವಾರಿಷೇಣ ಸಕಲಶಾಸ್ತ್ರ ಪಾರಂಗತನಾದ ಪುಷ್ಪದಾಡನೆಂಬ ಬ್ರಾಹ್ಮಣಮಿತ್ರನ ಸಂಸಾರ ಸುಖಲೋಲುಪತೆಯನ್ನು ಕಂಡು ರೋಸಿ, ತನ್ನ ಗುರುಗಳ ಬಳಿಗೆ ಎಳೆದುಕೊಂಡು ಬಂದು ಬಲವಂತವಾಗಿ ದೀಕ್ಷೆ ಕೊಡಿಸಿದನು. ಆದರೆ ಪುಷ್ಪದಾಡನ ಮನಸ್ಸು ಸದಾ ಮನೆಮಡದಿಯರನ್ನು ನೆನೆಯುತ್ತಿತ್ತು. ಒಮ್ಮೆ ವಾರಿಷೇಣ ವರ್ಧಮಾನಸ್ವಾಮಿಗಳ ಪಾದಪೂಜೆಗೆಂದು ಹೋಗಿದ್ದಾಗ ಅವನು ಮೆಲ್ಲಗೆ ನುಣುಚಿಕೊಂಡು ಮನೆಯನ್ನು ಸೇರಿದನು. ವಾರಿಷೇಣ ಗೆಳೆಯನಿಗೆ ಪಾಠಕಲಿಸುವ ಉದ್ದೇಶದಿಂದ,

ಶ್ರೇಣಿಕ ಮಹಾರಾಜನ ಅರಮನೆಗೆ ಹೋಗಿ ತನ್ನ ಹೆಂಡತಿಯರನ್ನೂ, ಪುಷ್ಪದಾಡನನ್ನೂ ಅವನ ಪತ್ನಿ ಸುದಂತಿಯನ್ನೂ ಕರೆಸಿದನು. ತನ್ನ ಮಡದಿಯರ ರೂಪಸೌಂದರ್ಯವನ್ನೂ, ಸುದಂತಿಯ ಕುರೂಪವನ್ನೂ ತೋರಿಸಿ, ಸಂಸಾರ ಸುಖವನ್ನು ನಂಬಿ ಕೆಡಬಾರದೆಂದು ಬೋಧಿಸಿದನು. 'ಒಮ್ಮೆ ವಮನ ಮಾಡಿದ್ದನ್ನು ನಾಯಿಯೂ ಮುಟ್ಟುವುದಿಲ್ಲ. ಜಿನೇಶ್ವರ ಪಾದವನ್ನು ನೆಚ್ಚಿದ ಮನುಷ್ಯ ಮತ್ತೆ ಸಂಸಾರಕ್ಕೆ ಹಿಂದಿರುಗಬಾರದು' ಎಂದು ಸುದಂತಿ ನುಡಿದಾಗ ಪುಷ್ಪದಾಡನಿಗೆ ವೈರಾಗ್ಯ ಹುಟ್ಟಿ ಮತ್ತೆ ದೀಕ್ಷೆ ಸ್ವೀಕರಿಸಿ ತಪಸ್ಸುಮಾಡಿ, ಮರಣಾನಂತರ ಸದ್ಗತಿ ಪಡೆದನು.

## 8. ಸೋಮದತ್ತನ ಕಥೆ (ವಾತ್ಸಲ್ಯ)

ಪಾಂಚಾಲದೇಶದಲ್ಲಿ ಅಹಿಚ್ಛತ್ರಪುರ. ಅದರ ದೊರೆ ಸಂತಪ. ಸೋಮದತ್ತನೆಂಬ ಬ್ರಾಹ್ಮಣ ಅವನ ಪುರೋಹಿತ. ಪುರೋಹಿತನ ಪತ್ನಿ ಯಜ್ಞದತ್ತೆ. ಯಜ್ಞದತ್ತೆ ಬಸುರಿಯಾದಾಗ ಜಿನಾಲಯಗಳನ್ನು ಸಂದರ್ಶಿಸಬೇಕೆಂಬ ಬಯಕೆಯಾಯಿತು. ಆದರೆ ಜಿನಪೂಜೆ ಅವರ ವಂಶಕ್ಕೆ ದೂರ. ಯಾರಿಗೂ ಮನಸ್ಸಿನ ನಿಜಸ್ಥಿತಿಯನ್ನು ತಿಳಿಸದೆ ಕೊರಗಿ ಕೊರಗಿ ಬಡವಾದಳು. ಮಗಳ ಕೊರಗನ್ನು ತಿಳಿಯಲಾರದ ತಂದೆತಾಯಿಯರು ಕಣ್ಣೀರಿಟ್ಟು ಅಂಗಲಾಚಿ ಕೇಳಿದರು. ಅವಳು ಮಾವಿನ ಹಣ್ಣನ್ನು ತಿನ್ನುವ ಬಯಕೆಯಾಗಿದೆಯೆಂದು ತಿಳಿಸಿದಳು. ಅಕಾಲದಲ್ಲಿ ಮಾವಿನ ಹಣ್ಣೆಲ್ಲಿ ಸಿಗಬೇಕು? ಸೋಮದತ್ತ ಅಲೆದಲೆದು, ಬಲವಾಹಿನಿಯೆಂಬ ನದಿಯ ಬಳಿಯಿದ್ದ ಮಾವಿನ ಮರವೊಂದರಲ್ಲಿ ಸದಾ ಹಣ್ಣು ತುಂಬಿರುತ್ತವೆಂಬ ಸುದ್ದಿಯನ್ನು ಬೇಡರಿಂದ ತಿಳಿದನು. ಅಲ್ಲಿಗೆ ಹೋಗಿ, ಸುಮತಿ ಭಟ್ಟಾರಕರೆಂಬ ಯತಿಗಳ ತಪೋಮಹಿಮೆಯಿಂದ ಅಕಾಲಫಲ ಸಾಧ್ಯವೆಂದು ನಿಶ್ಚಯಿಸಿದನು. ತನ್ನ ಹೆಂಡತಿಯ ಬಯಕೆಗೆ ಕಾರಣವೇನೆಂದು ಕೇಳುವಲ್ಲಿ, ಆಕೆಯ ಗರ್ಭದಲ್ಲಿದ್ದ ಮಗುವು ಜಿನಭಕ್ತನೆಂದೂ, ಅವನ ಬಯಕೆಯೇ ತಾಯಿಯ ಬಯಕೆಯೆಂದೂ ಭಟ್ಟಾರಕರು ತಿಳಿಸಿದರು. ಅನಂತರ ಸೋಮದತ್ತ ಶಿಷ್ಯರ ಕೈಲಿ ತನ್ನ ಹೆಂಡತಿಗೆ ಹಣ್ಣು ಕಳಿಸಿ, ತಾನು ವೈರಾಗ್ಯಪರನಾಗಿ ಜಿನದೀಕ್ಷೆ ಪಡೆದು, ತಪಸ್ಸಿಗಾಗಿ ನಾಭಿಗಿರಿಗೆ ಹೊರಟನು.

ಆ ಕಡೆ ಯಜ್ಞದತ್ತೆ ಗಂಡುಮಗುವನ್ನು ಹೆತ್ತಳು. ಆ ಮಗುವಿಗೆ ಶ್ರೀದತ್ತನೆಂದು ನಾಮಕರಣವಾಯಿತು. ಸೋಮದತ್ತ ನಾಭಿಗಿರಿಯಲ್ಲಿದ್ದ ಸಮಾಚಾರವನ್ನು ತಿಳಿದು, ಅವನ ತಪಸ್ಸನ್ನು ಕೆಡಿಸಿ, ಹಿಂದಿರುಗಿಸಬೇಕೆಂದು ಯಜ್ಞದತ್ತೆ ಬಂಧುಗಳೊಡನೆ ಹೋದಳು. ಅವರು ಹಲವು ಪರಿಯಾಗಿ ಜಿನಧರ್ಮವನ್ನು ಹಳಿದು, ಲೋಭ ಮೋಹಗಳನ್ನು ತಂದೊಡ್ಡಿದರೂ ಸೋಮ ದತ್ತ ಅಚಲನಾಗಿದ್ದನು. ಕೊನೆಗೆ ಅವರು ವಿಫಲಪ್ರಯತ್ನರಾಗಿ ಅವನ ಮುಂದೆ ಮಗುವನ್ನು ಬಿಸಾಡಿ ಹೊರಟುಹೋದರು.

ಅಮರಾವತಿಪುರದ ಶಂಭುವಿದ್ಯಾಧರ ಹಿರಿಯ ಮಗ ಭಾಸ್ಕರನಿಗೆ ಪಟ್ಟಕಟ್ಟಿ ತಪಸ್ಸಿಗೆ ಹೋದನು. ಕಿರಿಯ ಮಗ ಮಂದರದೇವ ಅಣ್ಣ ಭಾಸ್ಕರ ನನ್ನು ಸೋಲಿಸಿ, ತಾನೇ ರಾಜನಾದನು. ಭಾಸ್ಕರ ಮಡದಿಯೊಡನೆ ಭಾವಮೈದುನನಾದ ವಿಮಲವಾಹನನ ಬಳಿ ನಿಂತನು. ತೀರ್ಥಾಟನ ಸಮಯದಲ್ಲೊಮ್ಮೆ ಭಾಸ್ಕರ ಸೋಮದತ್ತ ಮುನಿಯ ಮುಂದಿದ್ದ ಮಗುವನ್ನು ತಂದು ವಿಮಲವಾಹನನಿಗಿತ್ತನು. ಆ ಮಗು ವಜ್ರಕುಮಾರ ಎಂಬ ಹೆಸರಿನಿಂದ ಬೆಳೆದು ವಿಮಲವಾಹನನ ಮಗಳು ಇಂದುಮತಿಯನ್ನು ಮದುವೆಯಾದನು. ಅನಂತರ ಮಂದರದೇವನ ರಾಜ್ಯವನ್ನು ಗೆದ್ದು ಸ್ವಾಧೀನಪಡಿಸಿಕೊಂಡನು.

ಹೀಗಿರುವಾಗ ಒಂದು ದಿನ ಭಾಸ್ಕರನ ಮಡದಿ ಮಣಿಮಾಲೆಯಿಂದ ತನ್ನ ಜನ್ಮ ವೃತ್ತಾಂತವನ್ನು ತಿಳಿದು ವಜ್ರಕುಮಾರ ವೈರಾಗ್ಯಪರನಾಗಿ ಸೋಮದತ್ತ ಮುನಿಯಿಂದ ದೀಕ್ಷೆ ಪಡೆದು, ತಪೋನಿರತನಾದನು.

ಪಾಂಡ್ಯದೇಶದ ಮಧುರಾಪುರಿಯ ದೊರೆ ಪೂತಿವಾಹನ ಅನಾಥೆ ಯಾಗಿ ಬೌದ್ಧ ಸನ್ಯಾಸಿಯೊಬ್ಬನ ರಕ್ಷೆ ಶಿಕ್ಷೆಯಲ್ಲಿ ಬೆಳೆದ ಬುದ್ಧ ದಾಸಿ ಯನ್ನು ದ್ವಿತೀಯ ಪತ್ನಿಯಾಗಿ ಸ್ವೀಕರಿಸಿದನು. ಒಮ್ಮೆ ಅವನ ಹಿರಿಯ ಹೆಂಡತಿ ಓಹಿಲೆ ಜಿನೋತ್ಸವವನ್ನಾಚರಿಸುವಾಗ ಬುದ್ಧದಾಸಿಗೆ ಮಾತ್ಸರ್ಯ ಹುಟ್ಟಿ ಬುದ್ಧೋತ್ಸವವನ್ನಾಚರಿಸಿ ಅರಮನೆಯ ಪರಿವಾರವೆಲ್ಲ ತನ್ನಕಡೆಗೆ ಬರುವಂತೆ ಪುಸಲಾಯಿಸಿದಳು. ಆಗ ಓಹಿಲೆ ಸೋಮದತ್ತ ಮುನಿಯ ಸಲಹೆಯ ಮೇರೆ ವಜ್ರಕುಮಾರ ಮುನಿಯನ್ನು ಕಂಡು ತನ್ನ ದುಃಖವನ್ನು ನಿವೇದಿಸಿಕೊಂಡಳು. ಆಗವನು ಅಮರಾವತಿಗೆ ಹೋಗಿ ವಿದ್ಯಾಧರ ಸಮೂಹದೊಡನೆ ದಕ್ಷಿಣ ಮಧುರೆಗೆ ಬಂದು ಓಹಿಲೆಯ ಜಿನಪೂಜೆಯಲ್ಲಿ

ಭಾಗವಹಿಸುವಂತೆ ಭಾಸ್ಕರನನ್ನು ಕೇಳಿಕೊಂಡನು. ಜಿನಪೂಜೆ ಸುಸೂತ್ರವಾಗಿ ಸಸಂಭ್ರಮವಾಗಿ ನೆರವೇರಿತು.

## 9. ವಿಷ್ಣುಕುಮಾರ ಮುನಿಯ ಕಥೆ (ಪ್ರಭಾವನೆ)

ಕುರುಜಾಂಗಣದ ಹಸ್ತಿನಾಪುರದಲ್ಲಿ ಮಹಾಪದ್ಮನೆಂಬ ಮಾಂಡಳಿಕ; ಅವನ ಹೆಂಡತಿ ಲಕ್ಷ್ಮೀದೇವಿ. ಪದ್ಮ ಮತ್ತು ವಿಷ್ಣುಕುಮಾರರು ಅವನ ಮಕ್ಕಳು. ಶ್ರುತಸಾಗರರೆಂಬ ಆಚಾರ್ಯರಿಂದ ಮಹಾಪದ್ಮ ಉಪದೇಶ ಪಡೆದು ವೈರಾಗ್ಯ ತಾಳಿದನು. ಯುವರಾಜ ಪದವಿಯನ್ನೊಲ್ಲದೆ ವಿಷ್ಣುಕುಮಾರನೂ ತಪೋನಿರತನಾದನು. ಪದ್ಮ ರಾಜ್ಯಭಾರ ವಹಿಸಿಕೊಂಡನು.

ಅದೇ ಸಮಯದಲ್ಲಿ ಅವಂತಿ ವಿಷಯದ ಉಜ್ಜಯಿನಿ ಪುರದಲ್ಲಿ ಜಯವರ್ಮನೆಂಬ ದೊರೆ ಆಳುತ್ತಿದ್ದನು. ಅವನ ಮಂತ್ರಿ ಬಲಿಯೆಂಬ ಬ್ರಾಹ್ಮಣ. ಅಕಂಪನಾಚಾರ್ಯರೆಂಬ ಮುನೀಶ್ವರರೊಮ್ಮೆ ಉಜ್ಜಯಿನಿಗೆ ಬರಲು ಜಯವರ್ಮ ಅವರನ್ನು ಸೇವಿಸಿ, ಅವರ ಉಪದೇಶದಿಂದ ಸುಪ್ರೀತನಾದನು. ಆದರೆ ಬಲಿಗೆ ಗುರೂಪದೇಶ ಹಿಡಿಸದೆ, ಕುತರ್ಕದಿಂದ ಅವರನ್ನು ಸೋಲಿಸಲಾರದೆ ಉಮ್ಮಳಿಸಿದನು. ದೊರೆ ಬಲಿಯ ವರ್ತನೆಯನ್ನು ಸಹಿಸಲಾರದೆ ದೇಶದಿಂದ ಉಚ್ಚಾಟನೆ ಗೊಳಿಸಿದನು. ಅಕಂಪನಾಚಾರ್ಯರೇ ತನ್ನ ಬೀಳ್ಮೆಗೆ ಕಾರಣವೆಂದು ಬಗೆದು ಮನದೊಳಗೆ ಸೇಡನ್ನು ಮಸೆಯುತ್ತ ಪದ್ಮರಾಜನನ್ನಾಶ್ರಯಿಸಿದನು.

ಬಲಿ ಪದ್ಮನ ಹಳೆಯ ಹಗೆ ಸಿಂಹಕೀರ್ತಿಯನ್ನು ಗೆದ್ದು, ಅವನ ಬಳಿ ಮಹಾಮಂತ್ರಿ ಪದವಿಯನ್ನು ಗಿಟ್ಟಿಸಿಕೊಂಡುದಲ್ಲದೆ, ಅವನು ಕೊಡಬಂದ ವರವನ್ನು ಮುಂದೆ ತೆಗೆದುಕೊಳ್ಳುವುದಾಗಿ ಒಪ್ಪಿಗೆ ಪಡೆದನು. ಕೆಲವು ಕಾಲಾನಂತರ ಅಕಂಪನಾಚಾರ್ಯರು ಹಸ್ತಿನಾವತಿಗೆ ಬಂದರು. ತನ್ನ ಸೇಡು ತೀರಿಸಿಕೊಳ್ಳಲು ಅದೇ ಸುಸಮಯವೆಂದು ಬಗೆದ ಬಲಿ, ದೇಶಕಲ್ಯಾಣಕ್ಕಾಗಿ ತಾನೊಂದು ಯಜ್ಞ ನಡೆಸುವುದಾಗಿಯೂ, ಅದು ಸುಸೂತ್ರವಾಗಿ ನಡೆಯಬೇಕಾದರೆ ತಾನು ಕೆಲವು ದಿನಗಳ ಮಟ್ಟಿಗೆ ರಾಜ್ಯಭಾರ ವಹಿಸಿಕೊಳ್ಳಬೇಕಾಗುತ್ತದೆಂದೂ ನುಡಿದು, ದೊರೆ ಹಿಂದೆ ಕೊಟ್ಟಿದ್ದ ವರವನ್ನು ನೆನಪಿಗೆ ತಂದುಕೊಟ್ಟನು. ದೊರೆ ಬಲಿಯ ಮೋಸಕ್ಕೆ ಬಲಿಯಾದನು.

ಯಾಗ ಸಮಯದಲ್ಲಿ ಋಷಿಗಳು ನಗರದಲ್ಲಿರಕೂಡದೆಂದು ಬಲಿ ಸಾರಿಸಿದನು. ಅಕಂಪನಾಚಾರ್ಯರು ಸಿತಗಿರಿಯನ್ನು ಬಿಡದಿದ್ದುದರಿಂದ, ಅದರ ಬಳಿ ಯಾಗ ಶಾಲೆಯನ್ನು ರಚಿಸಿ, ಬಳಿಯ ಗುಹೆಗಳಲ್ಲಿ ಕಾಡು ಜಂತುಗಳಿರಬಹುದಾದ್ದರಿಂದ ಅವುಗಳ ಬಾಯಿಗೆ ಪುಳ್ಳಿತುರುಕಿ, ಬೆಂಕಿ ಹಾಕುವಂತೆ ಬಲಿ ಸೇವಕರಿಗೆ ಆಜ್ಞಾಪಿಸಿದನು. ಆಚಾರ್ಯರಿಗೊದಗಿದ ಉಪಸರ್ಗವನ್ನು ಅವಧಿ ಜ್ಞಾನದಿಂದರಿತ ಜಿಷ್ಣು ಮುನಿಗಳು ಅದರ ಪರಿಹಾರಾರ್ಥವಾಗಿ ವಿಷ್ಣು ಕುಮಾರನನ್ನು ಕಳಿಸಿಕೊಟ್ಟರು. ವಿಷ್ಣು ವಾಮನರೂಪದಿಂದ ಯಜ್ಞ ಶಾಲೆಯನ್ನು ಪ್ರವೇಶಿಸಿದನು. ಬಲಿ ಭಯಭಕ್ತಿಗಳಿಂದ ವಿಷ್ಣುವನ್ನು ಉಪಚರಿಸಿ, ತನ್ನಿಂದೇನಾಗಬೇಕೆಂದು ಕೇಳಿದನು. ವಾಮನ ಮೂರಡಿ ನೆಲವನ್ನು ಕೇಳಿದನು. ತಮ್ಮನಾದ ಶುಕ್ರ ತಡೆದರೂ ಲಕ್ಷಿಸದೆ ಬಲಿ ನೆಲವನ್ನು ಧಾರೆಯೆರೆದುಕೊಟ್ಟನು. ವಾಮನ ಅದ್ಭುತರೂಪ ತಾಳಿ, ಒಂದೇ ಹೆಜ್ಜೆಗೆ ಲೋಕವನ್ನೆಲ್ಲ ಅಳೆದನು. ಆಗ ದೇವತೆಗಳಿಗೆ ಆಸನಕಂಪವಾಗಿ ಇಂದ್ರನನ್ನೊಡಗೂಡಿ ಹಸ್ತಿನಾವತಿಗೆ ಬಂದರು. ಬಲಿಯನ್ನು ಊರಿಂದ ನೂಕಿ ಅಕಂಪನಾಚಾರ್ಯರಿಗೆ ಪ್ರಾಪ್ತವಾಗಿದ್ದ ಉಪಸರ್ಗವನ್ನು ತಪ್ಪಿಸಿದರು. ಪದ್ಮರಾಜ ವಿಷ್ಣುವನ್ನು ಪೂಜಿಸಿ, ಧರ್ಮದಲ್ಲಿ ದೃಢಚಿತ್ತನಾದನು.

## 10. ಧನಕೀರ್ತಿಯ ಕಥೆ (ಅಹಿಂಸಾವ್ರತ)

ಮಾಳವ ದೇಶದ ಉಜ್ಜಯಿನಿನಗರದಲ್ಲಿ ವಿಶ್ವಂಭರ ಮಹಾರಾಜ ಅರಸುಗೆಯ್ಯುತ್ತಿದ್ದನು. ಗುಣಪಾಲಸೆಟ್ಟಿ ಅವನ ರಾಜ ಶ್ರೇಷ್ಠಿ ; ಸೆಟ್ಟಿಯ ಪತ್ನಿ ಧನಶ್ರೀ ; ಅವರ ಮಗಳು ಸುಬಂಧುಶ್ರೀ. ಒಂದು ದಿನ ಉದ್ಯಾನ ವನದಲ್ಲಿ ಉಯ್ಯಾಲೆಯಾಡುತ್ತಿದ್ದ ಸುಬಂಧುಶ್ರೀಯ ಸೌಂದರ್ಯಕ್ಕೆ ಮರುಳಾದ ಮಹಾರಾಜ ಅವಳನ್ನು ತನಗೆ ಮದುವೆ ಮಾಡಿಕೊಡುವಂತೆ ಸೆಟ್ಟಿಗೆ ಹೇಳಿಕಳುಹಿಸಿದನು. ಅನ್ಯಮತೀಯನ ಸಂಬಂಧ ಹೊಲ್ಲದೆಂದು ಮಡದಿಯೂ ಮಗಳೂ ಖಚಿತವಾಗಿ ನುಡಿದರು. ಅವರ ನಿಷ್ಠೆಯನ್ನು ಮೆಚ್ಚಿದ ಗುಣಪಾಲಸೆಟ್ಟಿ, ರಾಜನನ್ನು ಹಗೆಗೊಳ್ಳಲಾರದೆ ಮಗಳನೂ ಗರ್ಭಿಣಿಯಾದ ಹೆಂಡತಿಯನ್ನೂ ಮಿತ್ರನಾದ ಶ್ರೀದತ್ತನಲ್ಲಿ ಗೋಪ್ಯವಾಗಿರಿಸಿ, ಊರು ಬಿಟ್ಟು ತಲೆ ಮರೆಸಿ ಕೊಂಡನು.

ಒಂದು ದಿನ ಶಿವಗುಪ್ತರೆಂಬ ಆಚಾರ್ಯರು ಶ್ರೀದತ್ತಸೆಟ್ಟಿಯ ಮನೆಗೆ ಬಂದಾಗ, ತನ್ನನ್ನು ಭಕ್ತಿಯಿಂದ ಸತ್ಕರಿಸಿದನು. ಧನಶ್ರೀ ಹೆರುವ ಮಗು ಆ ನಾಡಿನ ರಾಜನಾಗುವನೆಂದು, ಅವರು ತಮ್ಮ ಶಿಷ್ಯನೊಡನೆ ಹೇಳಿದರು. ಆ ಭವಿಷ್ಯವಾಣಿಯನ್ನು ಕೇಳಿಸಿಕೊಂಡ ಶ್ರೀದತ್ತ ಸೆಟ್ಟಿ ಪೂರ್ವವೈರದ ಕಾರಣ ದಿಂದ ಆ ಮಗು ರಾಜನಾಗದಂತೆ ತಡೆಯಬೇಕೆಂದು ನಿರ್ಧರಿಸಿದನು. ಧನಶ್ರೀ ಹೆತ್ತೊಡನೆ ಮಗುವನ್ನು ತನಗೆ ತಲುಪಿಸಬೇಕೆಂದು ಕಟ್ಟಾಜ್ಞೆಮಾಡಿ ದಾಸಿ ಯರಿಗೆ ಸಾಕಷ್ಟು ಹಣ ಕೊಟ್ಟನು. ಪ್ರಸವವಾದನಂತರ ಮಗು ಸತ್ತು ಹುಟ್ಟಿ ತೆಂದು ಧನಶ್ರೀಗೆ ತಿಳಿಸಿ, ಅದನ್ನು ಕಟುಕನ ಕೈಗೊಪ್ಪಿಸಿ, ಕೊಲ್ಲುವಂತೆ ಆಣತಿಯಿತ್ತನು.

ಸುಂದರವಾದ ಮಗುವನ್ನು ಕೊಲ್ಲಲು ಮನಸ್ಸು ಬಾರದೆ ಕಟುಕ ಕಾಡಿನ ನದಿಯ ಬದಿಯಲ್ಲಿ ಅದನ್ನು ಮಲಗಿಸಿ ಹೋದನು. ಶ್ರೀದತ್ತನ ಮೈದುನನಾದ ಇಂದ್ರದತ್ತ ಸೆಟ್ಟಿ ಅದೇ ಕಾಡಿನಲ್ಲಿ ಬೀಡು ಬಿಟ್ಟಿದ್ದನು. ಅವನ ಸೇವಕರು ಕೈಗೆ ಸಿಕ್ಕಿದ ಆ ಮಗುವನ್ನು ತಂದು ಒಡೆಯನಿಗೆ ಕೊಟ್ಟರು. ಮಕ್ಕಳಿಲ್ಲದ ಸೆಟ್ಟಿ ತನಗೇ ಮಗುವಾದಂತೆ ಹಿರಿಹಿರಿ ಹಿಗ್ಗಿದನು.

ತನ್ನ ತಂಗಿ ರಾಧೆಗೆ ಮಗುವಾದ ಸುದ್ದಿ ತಿಳಿದು ಶ್ರೀದತ್ತ ಸೆಟ್ಟಿ ಇಂದ್ರ ದತ್ತ ಸೆಟ್ಟಿಯ ಮನೆಗೆ ಹೋದನು. ಅದು ಕಾಡಿನಲ್ಲಿ ಸಿಕ್ಕಿದ ಮಗುವೆಂದು ತಿಳಿದಾಗ ಶ್ರೀದತ್ತನಿಗೆ ಸಂಶಯ ಮೂಡಿತು. ಅದು ಧನಶ್ರೀಯ ಮಗುವೇ ಇರಬೇಕೆಂದು ನಿಶ್ಚಯಿಸಿ, ತಂಗಿಯನ್ನೂ ಮಗುವನ್ನೂ ಉಜ್ಜಯಿನಿಗೆ ಕರೆದು ಕೊಂಡು ನಡೆದನು. ಕೆಲವು ದಿನ ಕಳೆದನಂತರ ದಾದಿಯ ಪೋಷಣೆಯಲ್ಲಿದ್ದ ಮಗು ಸತ್ತಿತೆಂದು ಸುಳ್ಳು ಸುದ್ದಿ ಹುಟ್ಟಿಸಿ, ಅದನ್ನು ಕೊಲ್ಲುವಂತೆ ಕಟುಕನ ಕೈಗೆ ಕೊಟ್ಟನು. ಅವನು ಹಸುಳೆಯ ಮೇಲಣ ಕನಿಕರದಿಂದ ಕೊಲ್ಲದೆ ಹುಲ್ಲು ಹಸಲೆಯ ಮೇಲೆ ಮಲಗಿಸಿ ಊರಿಗೆ ಮರಳಿದನು. ತಮಗೆ ಸಿಕ್ಕಿದ ಮಗುವನ್ನು ದನಗಾಹಿಗಳು ಒಡೆಯ ಗೋವಿಂದನಿಗೆ ಕೊಟ್ಟರು. ಅವನು ಆ ಮಗುವಿಗೆ ಧನಕೀರ್ತಿಯೆಂದು ಹೆಸರಿಟ್ಟು ಸಾಕಿ ಸಲಹಿದನು.

ಮಗಳ ಮದುವೆಗೆ ತುಪ್ಪ ತರುವ ಸಲುವಾಗಿ ಶ್ರೀದತ್ತ ಗೊಲ್ಲಹಳ್ಳಿಗೆ ಹೋದನು. ಅಲ್ಲಿದ್ದ ಧನಕೀರ್ತಿಕುಮಾರನನ್ನು ಕಂಡು, ಗುಣಪಾಲನ ಮಗನೆಂದೇ ನಿಶ್ಚಯಿಸಿ, ಅವನನ್ನು ಕೊಲ್ಲುವಂತೆ ಮಗನಿಗೆ ಪತ್ರ ಬರೆದು,

ಆ ಪತ್ರವನ್ನು ಧನಕೀರ್ತಿಯ ಮೂಲಕ ಕಳುಹಿಸಿದನು. ಧನಕೀರ್ತಿ ಮಾರ್ಗಾಯಾಸದಿಂದ ಉಜ್ಜಯಿನಿ ಸಮೀಪದ ಶಿಪ್ರಾನದಿಯ ದಡದಲ್ಲಿ ಮಲಗಿದ್ದಾಗ, ಮೃಗಸೇನೆಯೆಂಬ ಸೂಳೆ ಅವನ ಸೆರಗಿನಲ್ಲಿದ್ದ ಕಾಗದವನ್ನು ಬಿಚ್ಚಿ ನೋಡಿ, ಅದರ ಒಕ್ಕಣೆಯಿಂದ ತಳಮಳಗೊಂಡು, ಅದನ್ನು ಹರಿದು ಬಿಸಾಡಿ, ಮತ್ತೊಂದು ಕಾಗದ ಬರೆದು, ಆ ಕಾಗದ ಕಂಡೊಡನೆ ಅವನಿಗೆ ತಂಗಿಯನ್ನು ಕೊಟ್ಟು ಮದುವೆ ಮಾಡುವಂತೆ ಒಕ್ಕಣಿಸಿ, ಅದನ್ನವನ ಸೆರಗಿಗೆ ಕಟ್ಟಿದಳು. ಕಾಗದವನ್ನು ಓದಿದೊಡನೆ ಮಹಾಬಲ ತನ್ನ ತಂಗಿಯನ್ನು ಧನಕೀರ್ತಿಯೊಡನೆ ಮದುವೆ ಮಾಡಿದನು.

ಊರಿಗೆ ಬಂದ ಶ್ರೀದತ್ತ ತನ್ನ ಪ್ರಯತ್ನ ವ್ಯರ್ಥವಾದದ್ದನ್ನು ಕಂಡು ಮರುಗಿ, ನಾಗಾಲಯದಲ್ಲಿ ಅವಿತಿದ್ದು, ಅಲ್ಲಿಗೆ ಬಂದವನನ್ನು ಕತ್ತರಿಸುವಂತೆ ಕಟುಕನನ್ನು ಗೊತ್ತುಮಾಡಿ, ಧನಕೀರ್ತಿಯ ಕೈಲಿ ನೈವೇದ್ಯ ಕಳಿಸಿದನು. ಮದವಣಿಗ ಒಂಟಿಯಾಗಿ ನಾಗಾಲಯಕ್ಕೆ ಹೋಗಬಾರದೆಂದು ಮಹಾಬಲ ಅವನ ಕೈಯ ತಟ್ಟೆಯನ್ನು ಕಸಿದುಕೊಂಡು ಹೊರಟನು. ಅವನು ಒಳಗೆ ಕಾಲಿಟ್ಟುದೇ ತಡ, ಕಟುಕ ಒಂದೇ ಏಟಿಗೆ ಅವನನ್ನು ಕೊಂದು ಹಾಕಿದನು. ಕೊನೆಗೆ ಲಡ್ಡುಗೆಗೆ ವಿಷ ಬೆರಿಸಿ ಕೊಲ್ಲುವಂತೆ ಶ್ರೀದತ್ತ ಹೆಂಡತಿಯನ್ನು ಪುಸಲಾಯಿಸಿದನು. ಆ ಹೂಟಕ್ಕೆ ಅವನೇ ಬಲಿಯಾದನು. ಧನಕೀರ್ತಿಯ ಮಹಿಮೆಯನ್ನು ತಿಳಿದ ಮಾಳವೇಶ್ವರ ಅವನನ್ನು ಅರಮನೆಗೆ ಕರೆಸಿಕೊಂಡು, ಮಗಳನ್ನು ಮದುವೆಮಾಡಿಕೊಟ್ಟನು. ಯಶೋಧರ ಋಷಿಗಳಿಂದ ಪೂರ್ವ ಜನ್ಮದ ಕಥೆ.

## 11. ಧನದನ ಕಥೆ (ಸತ್ಯವ್ರತ)

ವೆಂಗಿದೇಶದ ಪ್ರತಿಪಾಲ ಪುರದಲ್ಲಿ ಧನದನೆಂಬ ದೊರೆ ರಾಜ್ಯವಾಳುತ್ತಿದ್ದನು. ಆ ಊರಿನಲ್ಲಿದ್ದ ಸಂಘಶ್ರೀ ಎಂಬ ಬೌದ್ಧಮತೀಯನಿಗೆ ಕಮಲಶ್ರೀ ಎಂಬ ಮಗಳಿದ್ದಳು. ಅವಳ ರೂಪಿಗೆ ಮನಸೋತ ರಾಜ ಅವಳನ್ನು ಮದುವೆಯಾಗಿ ಕಾಲಕ್ರಮೇಣ ಜೈನ ಧರ್ಮದ ಕಡೆಗೆ ಅವಳನ್ನೊಲಿಸಿಕೊಂಡನು. ಸಂಘಶ್ರೀ ಬಹುಕಾಲದವರೆಗೆ ಜಿನಧರ್ಮದ ಕಡೆಗೆ ಗಮನ ಹರಿಸಲಿಲ್ಲ. ಒಂದು ದಿನ ಆಕಾಶ ಮಾರ್ಗದಲ್ಲಿ ಪ್ರಯಾಣ ಮಾಡುತ್ತಿದ್ದ

ಚಾರಣ ಋಷಿಗಳನ್ನು ನೋಡಿದಾಗ ಅವನಿಗೆ ಜಿನಮತದಲ್ಲಿ ನಂಬಿಕೆ ಮೂಡಿತು.

ಕೆಲವು ಕಾಲಾನಂತರ ಬುದ್ಧಶ್ರೀಯೆಂಬ ಬೌದ್ಧ ಭಿಕ್ಷು ಸಂಘಶ್ರೀ ಯನ್ನು ಮತ್ತೆ ಬೌದ್ಧಮತಕ್ಕೆ ತಿರುಗಿಸಿದನು. ಧನದ ಮಹಾರಾಜ ಅವನಿಗೆ ವಿವೇಕ ಹೇಳಲು ಪ್ರಯತ್ನಿಸಿ ವಿಫಲನಾದನು. ಹಿಂದೆ ಚಾರಣ ಋಷಿಗಳನ್ನು ನೋಡಿದ್ದಿಲ್ಲವೆಂದು ಸಂಘಶ್ರೀ ಸುಳ್ಳು ಹೇಳಿದನು. ಕೂಡಲೇ ಪುರದೇವತೆ ಗಳು ಅವನ ಕಣ್ಣುಗಳನ್ನು ಕಿತ್ತುಹಾಕಿದರು. ಕೊನೆಗೆ ಆ ಕೊರಗಿನಲ್ಲಿಯೇ ಅವನು ಸತ್ತುಹೋದನು. ಅವನ ಏಳು ಪೀಳಿಗೆಗಳ ಮಕ್ಕಳು ಕುರುಡಾಗಿ ಹುಟ್ಟಿದುವು. ಆದ್ದರಿಂದ ಅವರು ವಾಸಿಸುತ್ತಿದ್ದ ನಾಡಿಗೆ ಅಂಧಕ ವಿಷಯ ವೆಂದು ಹೆಸರಾಯಿತು.

## 12. ಜಿನದತ್ತ ಸೆಟ್ಟಿಯ ಕಥೆ (ಅಸ್ತೇಯವ್ರತ)

ಅವಂತಿ ದೇಶದ ಉಜ್ಜಯಿನಿ ನಗರದಲ್ಲಿ ಧರ್ಮಧರ ದೊರೆ. ಅಲ್ಲಿಯ ರಾಜಶ್ರೇಷ್ಠಿ ಜಿನದತ್ತ ; ಅವನ ಹೆಂಡತಿ ಜಿನೇಂದ್ರದಾಸಿ ; ಅವರ ಮಗ ಜಿನದಾಸ.

ಜಿನಪಾಲಿತರೆಂಬ ಮುನಿಗಳು ಉಜ್ಜಯಿನಿಯ ಬಳಿ ಬಂದು, ಕತ್ತಲೆ ಯಾದದ್ದರಿಂದ, ಶ್ಮಶಾನದಲ್ಲಿ ಮಲಗಿದರು. ಅದೇ ರಾತ್ರಿ ನಿಧಿನಿಕ್ಷೇಪವನ್ನು ಸಾಧಿಸಲು ಬಂದ ವಿಡಂಬ ಆ ಮುನಿಯನ್ನು ಹೆಣವೆಂದು ಭಾವಿಸಿ, ಆ ದೇಹದ ಬಳಿಗೆ ಮತ್ತೆರಡು ಹೆಣಗಳನ್ನು ಎಳೆತಂದು, ಹೆಣದ ತಲೆಗಳಲ್ಲಿ ಒಲೆಮಾಡಿಕೊಂಡು, ಬೆಂಕಿ ಹಚ್ಚಿ, ಚರು ಸಿದ್ಧಗೊಳಿಸುತ್ತಿದ್ದನು. ಸ್ವಲ್ಪ ಹೊತ್ತಿನಲ್ಲಿ ಮುನಿಯ ತೋಳ ಬುಡ ಹತ್ತಿಕೊಂಡು, ನರಗಳೆಲ್ಲ ಬೆಂದು ಹೋಗಿ, ತೋಳು ಕುಣಿಯತೊಡಗಿತು. ಆ ದೃಶ್ಯವನ್ನು ಕಂಡ ವಿಡಂಬ ಹೆದರಿ ಓಡಿಹೋದನು.

ಮರುದಿನ ಬೆಳಗ್ಗೆ ಜಿನದತ್ತ ಮುನಿಯನ್ನು ತನ್ನ ಮನೆಗೊಡಗೊಂಡು ಹೋಗಿ ಉಪಚರಿಸಿದನು. ಗಾಯ ಮಾಯ್ದನಂತರ ಮುನಿಗಳು ಸಂಚಾರಕ್ಕೆ ಹೊರಟರು. ಜಿನದತ್ತನೂ ಅವರನ್ನು ಹಿಂಬಾಲಿಸಿದನು. ಆ ಸಮಯವನ್ನು ಕಾದುಕೊಂಡಿದ್ದ ಜಿನದಾಸ ಉಗ್ರಾಣದ ಬಾಗಿಲು ತೆಗೆದು ಬಂಗಾರ ಕದಿ

ಯುತ್ತಿದ್ದನು. ತಂದೆ ಬಂದ ಸದ್ದು ಕೇಳಿ ಅವನು ಅಲ್ಲಿಯೇ ಅವಿತು ಕೊಂಡನು. ಬಂಗಾರ ಕಡಿವೆಯಾಗಿದ್ದುದನ್ನು ನೋಡಿದ ಜಿನದತ್ತನಿಗೆ ಜಿನಪಾಲಿತ ಮುನಿಗಳ ಮೇಲೆ ಸಂಶಯ ಮೂಡಿತು. ಅವರನ್ನು ಮತ್ತೆ ಮನೆಗೆ ಕರೆತಂದು, ಉಪಾಯಾಂತರದಿಂದ ಬಂಗಾರವನ್ನು ಹಿಂದಕ್ಕೆ ಪಡೆ ಯುವುದೆಂದು ಯೋಚಿಸಿ, ಒಂದು ಕಥೆ ಪ್ರಾರಂಭಿಸಿದನು. ಆ ಕಥೆಯ ರಹಸ್ಯವನ್ನೂ, ಸೆಟ್ಟಿಯ ಮಾತಿನ ಕೊಂಕನ್ನೂ ಅರಿತ ಮುನಿಗಳು ಅವನಿಗೆ ಬುದ್ಧಿ ಕಲಿಸಬೇಕೆಂದು ಮತ್ತೊಂದು ಕಥೆ ಹೇಳಿದರು. ಕಥೆಗೆ ಪ್ರತಿಕಥೆ ಹನ್ನೆರಡರ ತನಕ ಬೆಳೆದುವು. ಆದರೂ ಸೆಟ್ಟಿಗೆ ಸಂಶಯ ನಿವಾರಣೆಯಾಗ ಲಿಲ್ಲ. ಮುನಿಗಳು ಮೌನವ್ರತ ಹಿಡಿದರು. ಸೆಟ್ಟಿ ಕೋಪದಿಂದ ರಂಗು ರಂಗಾದನು. ಅಲ್ಲಿ ನಡೆಯುತ್ತಿದ್ದುದನ್ನೆಲ್ಲ ಬಾಗಿಲ ಹಿಂದೆ ನಿಂತು ಕೇಳಿಸಿ ಕೊಳ್ಳುತ್ತಿದ್ದ ಜಿನದಾಸ ತಂದೆಯ ಲೋಭಕ್ಕೂ ಅವಿವೇಕಕ್ಕೂ ಹೇಸಿ, ಬಂಗಾರವನ್ನು ಅವನ ಮುಖಕ್ಕೆಸೆದು, ಮುನಿಗಳಿಂದ ಜಿನದೀಕ್ಷೆ ಪಡೆದನು. ತನಗೂ ವೈರಾಗ್ಯ ಹುಟ್ಟಿ ಜಿನದತ್ತ ಸೆಟ್ಟಿಯೂ ದೀಕ್ಷೆ ಪಡೆದನು.

## 13. ಪ್ರಮಾಥಿ ಕುಮಾರನ ಕಥೆ (ಬ್ರಹ್ಮಚರ್ಯೆ)

ವತ್ಸಕಾವತೀ ವಿಷಯದ ಕೌಶಾಂಬಿಯಲ್ಲಿ ದಂತಿಬಲನೆಂಬ ರಾಜ ಧಾರಿಣೀ ದೇವಿಯೆಂಬ ಹೆಂಡತಿಯೊಡನೆ ಸುಖವಾಗಿ ರಾಜ್ಯವಾಳುತ್ತಿದ್ದನು. ಪ್ರಮಾಥಿಕುಮಾರ ಅವರ ಮಗ. ವಸಂತ ಕಾಲದಲ್ಲೊಂದು ದಿನ ದೊರೆ ಪರಿವಾರ ಸಮೇತನಾಗಿ ವನಕೇಳಿಗೆಂದು ಹೊರಟನು. ಪ್ರಮಾಥಿ ಕುಮಾರನೂ ಅವನ ಹೆಂಡತಿ ಸೌಂದರದೇವಿಯೂ ವನಕೇಳಿ ಜಲಕೇಳಿ ಗಳಿಂದ ಸಂತುಷ್ಟರಾಗಿ ತಳಿರು ಹೂಗಳ ಹಾಸಿಗೆಯಲ್ಲಿ ವಿಶ್ರಮಿಸಿಕೊಂಡರು.

ಅಷ್ಟರಲ್ಲಿ ವಸಂತನೆಂಬ ರಾಜಪುತ್ರ ಬಿಲ್ಜಾಣ್ಮೆಯನ್ನು ತನ್ನ ಸತಿಗೆ ತೋರಿಸುವ ಸಲುವಾಗಿ ಮಾಂಗಾಯ್ಗಳ ಗೊಂಚಲಿಗೆ ಬಾಣಗಳನ್ನು ಗುರಿ ಯಿಟ್ಟು, ಅವು ನೆಲಕ್ಕೆ ಬೀಳದಂತೆ, ಬಾಣದ ತುದಿಯಿಂದ ಕೆಳಗಿಳಿಸುತ್ತಿ ದ್ದನು. ಆ ದೃಶ್ಯವನ್ನು ನೋಡಿ ಆಶ್ಚರ್ಯ ಚಕಿತನಾದ ಪ್ರಮಾಥಿಕುಮಾರ ತಾನೂ ಆ ವಿದ್ಯೆಯನ್ನು ಕಲಿಯಬೇಕೆಂದಪೇಕ್ಷಿಸಿ, ಹೆಂಡತಿಯನ್ನು ಮಲಗಿ ದ್ದಲ್ಲಿಯೇ ಬಿಟ್ಟು, ಯೋಗ್ಯನಾದ ಗುರುವನ್ನರಸುತ್ತ, ಪಾಟಲೀಪುತ್ರ ನಗರ

ವನ್ನು ಸೇರಿದನು. ದ್ರೋಣಾಚಾರ್ಯರ ನೇತೃತ್ವದಲ್ಲಿ ವಿದ್ಯೆ ಕಲಿತು, ಅವರ ಪ್ರೀತಿಗೆ ಪಾತ್ರನಾಗಿ, ಶಿಷ್ಯೋತ್ತಮನಾದನು.

ಆ ನಗರದ ದೊರೆ ಸಿಂಹಸೇನ ಮಹಾರಾಜ. ಚಂದ್ರಲೇಖೆ ಅವನ ಮಗಳು. ಅವಳೊಮ್ಮೆ ಚೈತ್ಯಾಲಯಕ್ಕೆ ಹೋಗಿ ಹಿಂದಿರುಗುತ್ತಿದ್ದಾಗ ಮದ್ದಾನೆಯೊಂದು ಹುಚ್ಚೆದ್ದು ಓಡಾಡುತ್ತಿತ್ತು. ವನಸಂಚಾರಕ್ಕೆ ಹೊರಟಿದ್ದ ದ್ರೋಣ ಶಿಷ್ಯರಿಗೆ ಆ ದೃಶ್ಯ ಕಾಣಿಸಿತು. ಕಂಡುದೆ ತಡ ಪ್ರಮಾಥಿಕುಮಾರ ಜಿನನನ್ನು ಧ್ಯಾನಿಸುತ್ತ ಮದ್ದಾನೆಯ ಬೆನ್ನ ಮೇಲೇರಿ ಕುಳಿತನು. ರಾಜ ಕುಮಾರಿ ಕುಮಾರನಿಗೆ ಕೃತಜ್ಞತೆ ಸೂಚಿಸಿ, ಅವನನ್ನೇ ಸ್ಮರಿಸುತ್ತ ಅರಮನೆಗೆ ಹೋದಳು.

ಕುಮಾರನ ಆ ಸಾಹಸಕೃತ್ಯದಿಂದ ದ್ರೋಣಾಚಾರ್ಯರ ಇತರ ಶಿಷ್ಯರಿಗೆ ಹೊಟ್ಟೆಯುರಿಯೆದ್ದಿತು. ಅದು ದ್ರೋಣರಿಗೆ ತಿಳಿದು, ಅವರವರ ಯೋಗ್ಯತೆಯನ್ನು ಅರಿವು ಮಾಡಿಕೊಡುವ ಸಲುವಾಗಿ, ಊರ ಹೊರಗಿನ ಉದ್ಯಾನದಲ್ಲಿ ಪರೀಕ್ಷೆ ಏರ್ಪಡಿಸಿದರು. ಭೂಮಿಗೆ ಬೀಳದಂತೆ ಬಾಣ ಪ್ರಯೋಗದಿಂದ ತೆಂಗಿನಕಾಯನ್ನು ಕೆಳಗಿಳಿಸುವಂತೆ ಶಿಷ್ಯರಿಗೆ ಅಪ್ಪಣೆ ಮಾಡಿದರು. ಆ ಪರೀಕ್ಷೆಯಲ್ಲಿ ಪ್ರಮಾಥಿಕುಮಾರ ಮಾತ್ರ ಜಯಶೀಲನಾದನು. ಸಹಪಾಠಿಗಳ ಮಾತ್ಸರ್ಯ ಮತ್ತಷ್ಟು ರೇಗಿತು. ಎಲ್ಲರೂ ಒಟ್ಟಾಗಿ ಅವನನ್ನು ಮದ್ದಾನೆಯಿಂದ ತುಳಿಸಲು ಪ್ರಯತ್ನಿಸಿದರು. ಇದರಲ್ಲಿಯೂ ಅವರು ವಿಫಲ ಪ್ರಯತ್ನರಾಗಿ, ಕುಮಾರನಿಗೆ ಶರಣಾಗತರಾದರು.

ಅಷ್ಟರಲ್ಲಿ ಸಿಂಹಸೇನ ಮಹಾರಾಜ ಮಗಳ ಸ್ವಯಂವರವನ್ನು ನಿಶ್ಚಯಿಸಿ, ಚಂದ್ರವೇಧಕ ಯಂತ್ರವನ್ನು ಭೇದಿಸಿದವನಿಗೆ ಮಗಳನ್ನು ಧಾರೆಯೆರೆದು ಕೊಡುವುದಾಗಿ ಡಂಗುರ ಹೊಡೆಸಿದನು. ಚಂದ್ರಲೇಖೆ ಪ್ರಮಾಥಿಕುಮಾರನಿಗೆ ವಿಜಯಮಾಲೆ ಸೂಡಿದಳು. ನೂತನ ದಂಪತಿಗಳು ಸುಖಸಂತೋಷದಿಂದ ಕಾಲ ಕಳೆಯುತ್ತಿರುವಾಗ ಕೌಶಾಂಬೀಪುರವನ್ನು ಶತ್ರುಗಳು ಮುತ್ತಿದ ಸುದ್ದಿ ತಲುಪಿತು. ಪ್ರಮಾಥಿಕುಮಾರ ಮಡದಿಯೊಡನೆ ಭೀಮವನವೆಂಬ ಕಾಡಿನ ಮಾರ್ಗವಾಗಿ ಹೋಗುವಾಗ ಸುವೇಗನೆಂಬ ಕಳ್ಳನ ಕೈಗೆ ಸಿಕ್ಕುಬಿದ್ದನು. ಅವನು ದ್ರೋಣರ ಪ್ರತಿಮೆಯನ್ನು ನಿರ್ಮಿಸಿಕೊಂಡು, ಧನುರ್ವಿದ್ಯೆಯನ್ನು ಅಭ್ಯಸಿಸುತ್ತಿದ್ದನು. ಚಂದ್ರಲೇಖೆಯನ್ನು ನೋಡಿ

ಮೋಹಗೊಂಡ ಸುವೇಗ ಪ್ರಮಾಥಿಕುಮಾರನ ಮೇಲೆ ಬಿದ್ದನು. ಪ್ರಮಾಥಿ ಕುಮಾರ ಮಡದಿಯ ಸಲಹೆಯಂತೆ ಬೇಡಪಡೆಯನ್ನು ಸಮ್ಮೋಹನಾಸ್ತ್ರದಿಂದ ಕೆಡಹಿದರೂ, ಸುವೇಗನನ್ನು ಜಯಿಸಲಾಗಲಿಲ್ಲ. ಶತ್ರುವಿಗೆ ವಶವಾಗುವುದ ಕ್ಕಿಂತ ಮರಣವೇ ಲೇಸೆಂದು ಚಂದ್ರಲೇಖೆ ಗಂಡನಿಗೂ ಸುವೇಗನಿಗೂ ನಡುವೆ ನಿಂತಳು. ಸುವೇಗ ಅವಳ ಮೋಹಿನೀ ಶಕ್ತಿಯಿಂದ ತಬ್ಬಿಬ್ಬಾದನು. ಆಗ ಪ್ರಮಾಥಿಕುಮಾರ ಸರಳು ಜೋಡಿಸಿ, ಹಗೆಯ ತಲೆಯನ್ನುರುಳಿಸಿದನು. ಪರಸ್ತ್ರೀ ವ್ಯಸನಿಯಾದ ಸುವೇಗನಿಗೆ ನರಕ ಪ್ರಾಪ್ತಿಯಾಯಿತು.

ಪ್ರಮಾಥಿಕುಮಾರನ ಆಗಮನವಾರ್ತೆ ಕಿವಿಗೆ ಬಿದ್ದುದೇ ತಡ ಶತ್ರು ಗಳು ಪಲಾಯನ ಮಾಡಿದರು. ಅನಂತರ ಪ್ರಮಾಥಿಕುಮಾರ ಯುವರಾಜ ನಾಗಿ ಸೌಂದರದೇವಿ ಚಂದ್ರಲೇಖೆಯರೊಡನೆ ವಿನೋದದಿಂದ ಕಾಲ ಕಳೆದು, ಕೊನೆಗೆ ಧರ್ಮಘೋಷ ಭಟ್ಟಾರಕರೆಂಬ ಋಷಿಗಳ ಬೋಧೆಯಿಂದ ವೈರಾಗ್ಯ ತಾಳಿ, ತಪೋನಿರತನಾದನು.

## 14. ಉಪರಿಚರ ಮಹಾರಾಜನ ಕಥೆ (ಅಪರಿಗ್ರಹ)

ಕುರುಜಾಂಗಣದ ಶ್ರಾವಂತಿಪುರದಲ್ಲಿ ಉಪರಿಚರ ಮಹಾರಾಜ. ಪದ್ಮಾವತಿ, ಪ್ರಭಾವತಿ, ಸುಪ್ರಭೆ ಮತ್ತು ಕನಕಪ್ರಭೆಯರು ಅವನ ಪಟ್ಟ ಮಹಿಷಿಯರು. ಪದ್ಮಾವತಿಯ ಮಗ ಅನಂತವೀರ್ಯ.

ಒಮ್ಮೆ ಮಹಾರಾಜ ಮಹಾರಾಣಿಯರೊಡನೆ ಜಲಕೇಳಿಯಲ್ಲಿ ಮಗ್ನ ನಾಗಿದ್ದಾಗ, ಆಕಾಶಮಾರ್ಗದಲ್ಲಿ ಹೋಗುತ್ತಿದ್ದ ಮದನವೇಗೆಯೆಂಬ ಖೇಚರ ಸ್ತ್ರೀ ಗಂಡನಾದ ವಜ್ರದಾಡನೊಡನೆ ಈ ನೆಲದವರ ಸೈಪು ತಮಗಿಲ್ಲವೆಂದು ಕಾತರಿಸಿದಳು. ಮಚ್ಚರಗುಳಿ ವಜ್ರದಾಡ ಕೂಡಲೇ ಮಡದಿಯನ್ನು ಅಲಕಾ ವತಿಯಲ್ಲಿ ಬಿಟ್ಟು, ದೊಡ್ಡದೊಂದು ಬಂಡೆಯಿಂದ ಕೊಳವನ್ನು ಮುಚ್ಚಿ ಬಿಟ್ಟನು. ತಮಗೆ ಪ್ರಾಪ್ತವಾದ ವಿಪತ್ತಿಗಾಗಿ ರಾಜ ಬೇಗುದಿಗೊಂಡನು ; ರಾಣಿಯರು ಬೆದರದೆ, ಅದೆಲ್ಲ ತಮ್ಮ ಕರ್ಮಫಲವೆಂದರಿತು, ಪರಿಗ್ರಹಗಳನ್ನು ತೊರೆದು, ಜಿನಧ್ಯಾನಾಸಕ್ತರಾಗಿದ್ದು, ದೇಹತ್ಯಾಗಾನಂತರ ಆನಂದ, ಕಾಂತ, ಅಮಿತ ಕಾಂತ, ಸುಕಾಂತರೆಂಬ ದೇವರಾಗಿ ಹುಟ್ಟಿದರು. ಆದರೆ ರಾಜ ಪರಿಗ್ರಹಾಕಾಂಕ್ಷೆಯಿಂದ ಮರುಗಿ, ದೇಹ ತೊರೆದು, ಮನೋಹರವೆಂಬ

ಉದ್ಯಾನದಲ್ಲಿ ಸರ್ಪಾಶ್ರಯವೆಂಬ ಗುಹೆಯಲ್ಲಿ ಹೆಬ್ಬಾವಾಗಿ ಹುಟ್ಟಿದನು.

ಅನಂತವೀರ್ಯ ಪಟ್ಟಾಭಿಷಿಕ್ತನಾದ ಕೆಲವೇ ದಿನಗಳಲ್ಲಿ ಸಾರಸ್ವತರೆಂಬ ಮುನಿಗಳು ಐನೂರ್ವರು ಶಿಷ್ಯರೊಡನೆ ಬಂದು ನಗರದ ಬಹಿರುದ್ಯಾನದಲ್ಲಿ ತಂಗಿದರು. ದೊರೆ ಆಚಾರ್ಯರನ್ನು ಅಷ್ಟವಿಧಾರ್ಚನೆಗಳಿಂದ ಪೂಜಿಸಿ ಅವರಿಂದ ಧರ್ಮೋಪದೇಶವನ್ನು ಕೇಳಿ, ತಮ್ಮ ತಾಯಿ ತಂದೆಗಳಿಗೊದಗಿದ ಗತಿಯನ್ನು ಮನಗಂಡನು. ಆಚಾರ್ಯರು ಹೇಳಿದಂತೆ ಅನಂತವೀರ್ಯ ಗುಹೆಯ ಬಾಗಿಲಲ್ಲಿ ನಿಂತು ಧರ್ಮೋಪದೇಶ ಮಾಡಿದನು. ಅದನ್ನಾಲಿಸಿದ ಹಾವಿಗೆ ಜಾತಿಸ್ಮರಣೆಯುಂಟಾಯಿತು. ಅಷ್ಟು ಹೊತ್ತಿಗೆ ಪೂರ್ವಭವದ ರಾಣಿಯರೂ ದೇವಲೋಕದಿಂದಿಳಿದು ಬಂದು ಅಪರಿಗ್ರಹದ ಮಹತ್ವವನ್ನು ಬೋಧಿಸಿದರು. ಅನಂತರ ಸಾರಸ್ವತ ಮುನಿಗಳೂ ಬಂದು ಅಣುವ್ರತಗಳನ್ನು ಉಪದೇಶಿಸಿ, ಸನ್ಯಾಸಧರ್ಮದ ಮಹಿಮೆಯನ್ನು ಬೋಧಿಸಿದರು. ಇಷ್ಟಾದರೂ ಆ ಹಾವು ಸಾಯುವಾಗ ವಜ್ರದಾಡನ ಕುಕಾರ್ಯವನ್ನು ನೆನೆಯುತ್ತ ಸತ್ತದ್ದರಿಂದ ವ್ಯಂತರಲೋಕದಲ್ಲಿ ವಿಮಲದೇವನಾಗಿ ಜನಿಸಿದನು. ತನ್ನ ತಂದೆಯ ಕನಿಕರಾವಸ್ಥೆಯನ್ನು ಕಂಡ ಅನಂತವೀರ್ಯ ತನ್ನ ಮಗ ಸುಬಾಹುವಿಗೆ ಪಟ್ಟಕಟ್ಟಿ, ದೀಕ್ಷೆ ತಳೆದು, ತಪಸ್ಸುಮಾಡಿ, ಸಮ್ಮೇದಶಿಖರದಲ್ಲಿ ನಿರ್ವಾಣ ಹೊಂದಿದನು.

ಆ ಕಡೆ ವಿಮಲ ಪೂರ್ವವೈರಿಯಾದ ವಜ್ರದಾಡನನ್ನು ಬೆನ್ನಟ್ಟಿ, ಅವನ ವಿದ್ಯೆಯನ್ನು ನಾಶಗೊಳಿಸಿ, ಅವನ ಹೆಂಡತಿಯರನ್ನು ನೀರಲ್ಲದ್ದಿ, ಹಳೆಯ ಸೇಡನ್ನು ತೀರಿಸಿಕೊಂಡನು. ವಜ್ರದಾಡ ರೌದ್ರಧ್ಯಾನದಿಂದ ಸತ್ತು ನರಕದಲ್ಲಿ ಹುಟ್ಟಿದನು. ವಿಮಲದೇವ ಹಸ್ತಿನಾಪುರದ ದೊರೆ ಜಯದತ್ತ ಮಹಾರಾಜನ ಮಡದಿ ವಿಜಯಮಹಾದೇವಿಯ ಹೊಟ್ಟೆಯಲ್ಲಿ ಗುರುದತ್ತನೆಂಬ ಮಗನಾಗಿ ಜನಿಸಿದನು. ಗುರುದತ್ತ ಚಂಪಾಪುರದ ಧಾತ್ರೀವಾಹನನ ಮಗಳು ಅಭಯಮತಿಯನ್ನು ಮದುವೆಯಾಗಿ, ಹಸ್ತಿನಾಪುರದಲ್ಲಿ ಸುಖದಿಂದ ರಾಜ್ಯವಾಳುತ್ತಿದ್ದನು.

ನಾರಕ ಜೀವನವನ್ನು ಮುಗಿಸಿದ ವಜ್ರದಾಡ ಕುರುಜಾಂಗಣದ ನೀಲಗಿರಿಯಲ್ಲಿ ಹುಲಿಯಾಗಿ ಹುಟ್ಟಿ, ಸುತ್ತಮುತ್ತಣ ಜನರಿಗೆ ಕಾಟ ಕೊಡುತ್ತಿದ್ದನು. ಪ್ರಜೆಗಳ ಗೋಳನ್ನು ಕೇಳಿದ ಗುರುದತ್ತರಾಜ ಪೂರ್ವ ವೈರ

ಸ್ಮರಣೆಯಿಂದ ಹುಲಿಯಿದ್ದ ಗುಹೆಗೆ ಪುಳ್ಳೆಗಳನ್ನು ತುಂಬಿಸಿ, ಬೆಂಕಿ ಹೊತ್ತಿಸಿದನು. ಹುಲಿ ಉಸಿರು ಕಟ್ಟಿ ಸತ್ತು, ಪಳ್ಳಿಖೇಟ ಎಂಬ ಹಳ್ಳಿಯಲ್ಲಿ ಇಳಾಭರಣ ಕಂಟಕಿಯರೆಂಬ ಬ್ರಾಹ್ಮಣದಂಪತಿಗಳಿಗೆ ಹಳಮುಖನೆಂಬ ಮಗನಾಗಿ ಜನಿಸಿತು.

ಅಭಯಮತಿ ಗುರುದತ್ತರು ಅಮೃತಾಶಯರೆಂಬ ಮುನಿಗಳಿಂದ ಪೂರ್ವಭವಾವಳಿಯನ್ನು ತಿಳಿದು, ಸಂಸಾರದಲ್ಲಿ ವಿರಕ್ತಿ ಹೊಂದಿ, ಪುತ್ರ ಶ್ರೀದತ್ತನಿಗೆ ರಾಜ್ಯಭಾರ ವಹಿಸಿ, ಜಿನದೀಕ್ಷೆ ಪಡೆದರು. ಗುರುದತ್ತ ಭಟಾರರು ಸಂಚಾರ ಕಾಲದಲ್ಲೊಮ್ಮೆ ಪಳ್ಳಿಖೇಡಕ್ಕೆ ಬಂದು, ಮಳೆ ಸುರಿಯುತ್ತಿದ್ದುದರಿಂದ ಪ್ರತಿಮಾಯೋಗದಲ್ಲಿ ನಿಂತರು. ಹಳಮುಖ ಮೂಡಣ ಹೊಲದಿಂದ ಪಡುವಣ ಹೊಲಕ್ಕೆ ಏರಟ್ಟೆಕೊಂಡು ಹೋಗುತ್ತ, ತನ್ನ ಹೆಂಡತಿ ಹಿಂದಿನಿಂದ ಅನ್ನ ತೆಗೆದುಕೊಂಡು ಮೂಡಣ ಕಡೆಗೆ ಹೋಗುವುದಾದರೆ ಪಡುವಣ ಕಡೆಗೆ ಕಳುಹಿಸುವಂತೆ ಮುನಿಗಳಿಗೆ ಹೇಳಿಹೋದನು. ಹೊತ್ತು ಮೀರಿದರೂ ಅನ್ನ ಬಾರದ್ದರಿಂದ ಹಳಮುಖ ಕುಪಿತನಾಗಿ, ಮನೆಗೆ ಬಂದು, ಹೆಂಡತಿಯನ್ನು ಬಾರಿಸಿದನು. ಋಷಿಗಳು ತನಗೇನೂ ಹೇಳಿಲ್ಲವೆಂದು ಅವಳು ಸುಳ್ಳು ನುಡಿದಳು. ಹಳಮುಖ ಉರಿದೆದ್ದು, ಗುರುದತ್ತನ ಬಟ್ಟೆಗೆ ಎಣ್ಣೆ ಸುರಿದು, ಕಿಚ್ಚು ಮುಟ್ಟಿಸಿದನು. ಗುರುದತ್ತ ಭಟಾರರು ಬೆಚ್ಚದೆ, ಪೂರ್ವ ವೈರವನ್ನು ನೆನೆಯದೆ, ಪರಿಗ್ರಹವನ್ನು ತೊರೆದು, ಶುಕ್ಲಧ್ಯಾನದಿಂದ ಘಾತಿ ಕರ್ಮಗಳನ್ನು ನಿರ್ಮೂಲಮಾಡಿ, ಕೇವಲ ಜ್ಞಾನಿಗಳಾದರು. ಇದನ್ನೆಲ್ಲ ನೋಡಿದ ಹಳಮುಖ ಮುನಿಚರಣಕ್ಕೆರಗಿ, ವಿರಕ್ತನಾಗಿ, ಜಿನದೀಕ್ಷೆ ಪಡೆದು ತಪೋನಿರತನಾದನು.

೫

**ಕಥಾಮೂಲ:** ಭಾವಗೀತೆಯನ್ನು ಬಿಟ್ಟರೆ ಕಥೆಯೇ ಪ್ರಾಚೀನತಮವಾದ ಸಾಹಿತ್ಯ ಪ್ರಕಾರ. ಅದರ ತಾಯಿಬೇರು ಭೂತಕಾಲದ ಅನಂತ ಗರ್ಭದಲ್ಲಿ ಚಾಚಿಕೊಂಡಿದ್ದು, ಮಾನವನ ಧೀಶಕ್ತಿ ಸಂಶೋಧನ ಸಾಮರ್ಥ್ಯಗಳಿಗೆ ನಿಲುಕದಿದೆ. ಭಾಷೆ ಸಂಭಾಷಣೆಗಳ ಪ್ರಾದುರ್ಭಾವದೊಡನೆ ಕಥನ ಕಲೆ ಅಂಕುರಿಸಿರಬೇಕು. ಮಾತುಬಲ್ಲ ಜನ ಬಾಯಿ ಮುಚ್ಚಿಕೊಂಡು ತೆಪ್ಪಗೆ

ಕುಳಿತಿರಲಾರರು. ಹೊತ್ತುಹೋಗುವುದಕ್ಕಾದರೂ ಹರಟಬೇಕು ; ಬೇಸರಾಸರುಗಳ ನಿವಾರಣೆಗಾದರೂ ನಾಲಗೆ ಚುರುಕಾಗಿರಬೇಕು. ಒಬ್ಬರು ಮತ್ತೊಬ್ಬರನ್ನು ನಗಿಸಬೇಕಾದರೆ, ಪರರ ದುಃಖವನ್ನು ಮರೆಸಬೇಕಾದರೆ ಕಥೆಯ ಮಾಧ್ಯಮ ಅತ್ಯವಶ್ಯವಾಗುತ್ತದೆ. ವಿರಾಮ ದೊರೆತು, ಕಲ್ಪನೆಯ ಪಕ್ಷಿ ಗರಿಗೆದರಿತೆಂದರೆ, ಕಥೆ ಲೋಕ ಲೋಕಾಂತರಗಳಿಂದ ಧರೆಗಿಳಿದು ಬರುತ್ತದೆ. ಕಥೆ ಮಾನವ ಸಮಾಜದ ಯಾವೊಂದು ವರ್ಗಕ್ಕೂ ಮಿಸಲಾದ ಆಸ್ತಿಯಲ್ಲ ; ಅಜ್ಜ ಅಜ್ಜಿಯರು ಗುರು ಹಿರಿಯರು ಗಂಡ ಹೆಂಡಿರು ರಾಜ ರಾಣಿಯರು ಯಕ್ಷ ಯಕ್ಷಿಯರು ಪಂಡಿತ ಪಾಮರರು ಮೃಗ ಪಕ್ಷಿಗಳು ರೈತ ಕಾರ್ಮಿಕರು ಮಕ್ಕಳು ಮರಿಗಳು ಎಲ್ಲರೂ ಕಥೆ ಕಟ್ಟುವುದರಲ್ಲಿ, ಮತ್ತು ಕೇಳುವುದರಲ್ಲಿ ಆಸಕ್ತಿ ವಹಿಸುತ್ತಾರೆ. ಬೇಸರಾದರೆ ಕಥೆ, ಕೆಲಸ ಸಾಗಬೇಕಾದರೆ ಕಥೆ, ನಿದ್ರೆಬಾರದಿದ್ದರೆ ಕಥೆ, ತತ್ತ್ವೋಪದೇಶಕ್ಕೆ ಕಥೆ, ಸಮಸ್ಯಾ ಪರಿಹಾರಕ್ಕೆ ಕಥೆ, ದೇವರ ಕಡೆಗೆ ಮನಸ್ಸು ತಿರುಗಿಸಬೇಕಾಗಿದ್ದರೆ ಕಥೆ, ದೇಶಾಭಿಮಾನ ಹುಟ್ಟಿಸಬೇಕಾಗಿದ್ದರೆ ಕಥೆ, ರಾಜನೀತಿಯ ಬೋಧೆಗೆ ಕಥೆ— ಬಹುಶಃ ಜೀವನದಲ್ಲಿ ಇಷ್ಟು ವ್ಯಾಪಕವಾಗಿರುವ ಸಾಹಿತ್ಯ ಪ್ರಕಾರ ಮತ್ತೊಂದಿಲ್ಲವೆಂದು ಹೇಳಬಹುದು. ಪ್ರಾಕ್ಕಾಲದಿಂದ ಕಥಾಸಾಹಿತ್ಯ ಮಾನವರನ್ನು ಪ್ರಚೋದಿಸುತ್ತ ಆಹ್ಲಾದಗೊಳಿಸುತ್ತ ರೂಪಿಸುತ್ತ, ಅವನಿಗೆ ತುಷ್ಟಿ ಪುಷ್ಟಿ ಜ್ಯೋತಿಗಳನ್ನು ನೀಡುತ್ತ ಸಂಜೀವನ ಶಕ್ತಿಯಾಗಿ ಪರಿಣಮಿಸಿದೆ.

ಕಥೆ ಪ್ರಮುಖವಾಗಿ ಕಟ್ಟಿದ್ದು, ನಡೆದದ್ದಲ್ಲ; ಕಲ್ಪನೆಯೇ ಅದರ ಜೀವಾಳ, ಭಾವಸತ್ಯವೇ ಅದರ ನೆಲಗಟ್ಟು. ನಡೆದದ್ದು, ಮಾಡಿದ್ದು ಅಲ್ಪ ಸ್ವಲ್ಪವಿರಬಹುದು ; ಅದರ ಸುತ್ತ ಕಲ್ಪನೆ ಹೆಣೆದುಕೊಂಡಿರುತ್ತದೆ. ಭಾವ ಸಂವಾದದಿಂದ ಅದು ಆಸ್ವಾದವಾಗುತ್ತದೆ, ಆಕರ್ಷಕವಾಗುತ್ತದೆ. ಇಂಥ ಕಥೆಗಳು ಪ್ರಪಂಚದ ಎಲ್ಲ ಭಾಷೆಗಳಲ್ಲಿಯೂ ಯಥೇಚ್ಛವಾಗಿವೆ. ಕಥಾ ಶಾಸ್ತ್ರಜ್ಞರು ಎಲ್ಲ ಕಥಾವಸ್ತುಗಳನ್ನು ವರ್ಗೀಕರಣಮಾಡಿ, 'ಅವೆಲ್ಲ ಸುಮಾರು ಒಂದು ನೂರಾಗುತ್ತವೆಂದು ನಿರ್ಧರಿಸಿದ್ದಾರೆ; ಮಿಕ್ಕವು ಅವುಗಳಿಂದ ಜನ್ಯಗಳು, ಅವುಗಳ ಛಾಯೆಗಳು.'[1]

---

1. ಕಥಾಮೃತ: ಡಾ. ಎ. ಆರ್. ಕೃಷ್ಣಶಾಸ್ತ್ರೀ, ಪುಟ lxviii.

ಭಾರತೀಯ ಕಥಾಸ್ರೋತಕ್ಕೆ ಜಾನಪದ ಸಾಹಿತ್ಯವೇ ತಲಕಾವೇರಿ. ಆರ್ಯ ಮತ್ತು ಆರ್ಯೇತರ ಜನಾಂಗಗಳ ಸಾಮಾನ್ಯ ಜನರಲ್ಲಿ ಬಳಕೆಯಲ್ಲಿದ್ದ ಕಥೆಗಳು ಕಾಲಕ್ರಮೇಣ ವೇದೋಪನಿಷತ್ತು ಪುರಾಣೇತಿಹಾಸಗಳಲ್ಲಿ ಸೇರಿಕೊಂಡುವು. ವೃತ್ರ ಹರಿಶ್ಚಂದ್ರ ಊರ್ವಶಿ ಪುರೂರವರ ಕಥೆಗಳು ವೇದಗಳಲ್ಲಿ ಬರುತ್ತವೆ; ನಚಿಕೇತ ಸತ್ಯಕಾಮ ಜಾಬಾಲಿ ಮೊದಲಾದ ಉಪಾಖ್ಯಾನಗಳು ಉಪನಿಷತ್ತುಗಳಲ್ಲಿ ಕಾಣಿಸಿಕೊಳ್ಳುತ್ತವೆ. ನಳದಮಯಂತಿಯರ ಕಥೆ, ಧರ್ಮವ್ಯಾಧನ ಕಥೆ, ಅಹಲ್ಯೆ ಗೌತಮರ ಕಥೆ, ಇನ್ನೂ ಎಷ್ಟೆಷ್ಟೋ ಕಥೆಗಳು ಪುರಾಣೇತಿಹಾಸಗಳ ಭಾಗವಾಗಿ ಬರುತ್ತವೆ. ಅಲ್ಲೆಲ್ಲ ಅವು ನೀತಿಬೋಧೆ ತತ್ತ್ವೋಪದೇಶ ಧರ್ಮಾಭ್ಯುದಯಗಳಿಗೆ ಸಹಾಯಕವಾಗಿ, ಪ್ರತಿಮೆ ಪ್ರತೀಕಗಳಾಗಿ, ದೃಷ್ಟಾಂತ ಸಾಮತಿಗಳ ರೂಪದಲ್ಲಿ ಮೈದೋರುತ್ತವೆ.

ಕ್ರಿಸ್ತಶಕ ಒಂದನೆಯ ಶತಮಾನದ ಹೊತ್ತಿಗೆ ಕಥಾಸಾಹಿತ್ಯ ಪ್ರತ್ಯೇಕ ರೂಪವನ್ನು ಪಡೆದು ಸ್ವತಂತ್ರವಾಗಿ, ಎಂಟನೆಯ ಶತಮಾನದ ತನಕ ವಿಕಾಸಗೊಂಡಿತೆಂದು ಜಾಕೋಬಿಯವರು ಅಭಿಪ್ರಾಯಪಡುತ್ತಾರೆ.[1] ಕ್ರಿ. ಶ. ಒಂದನೆಯ ಶತಮಾನದಲ್ಲಿದ್ದ ಗುಣಾಢ್ಯ ಪೈಶಾಚೀ ಭಾಷೆಯಲ್ಲಿ ಬೃಹತ್ಕಥೆಯನ್ನು ರಚಿಸಿದ್ದಾನೆ. ಬಹುಶಃ ಅವನು ತನ್ನ ಕಾಲದಲ್ಲಿ ಚೆದರಿ ಹೋಗಿದ್ದ ಜಾನಪದ ಕಥೆಗಳನ್ನೆಲ್ಲ ಒಟ್ಟುಗೂಡಿಸಿ, ಅವುಗಳಿಗೊಂದು ರೂಪು ಕೊಟ್ಟಂತೆ ಕಾಣುತ್ತದೆ. ಆದರೆ ಆ ಗ್ರಂಥ ಸಿಕ್ಕಿಲ್ಲ. ಅದರ ಆಧಾರದ ಮೇಲೆ ರಚಿತವಾಗಿವೆಯೆಂದು ಹೇಳಲಾದ ತಮಿಳಿನ ಪೆರುಂಗತೈ, ಬುಧಸ್ವಾಮಿಯ ಬೃಹತ್ಕಥಾ ಶ್ಲೋಕ ಸಂಗ್ರಹ (ಎಂಟನೆಯ ಶತಮಾನ), ಕ್ಷೇಮೇಂದ್ರನ ಬೃಹತ್ಕಥಾಮಂಜರೀ (೧೦೨೯-೧೦೬೪), ಸೋಮದೇವನ ಕಥಾ ಸರಿತ್ಸಾಗರ (೧೦೬೩-೧೦೮೧) ಮತ್ತು ಬೇರೆ ಆಧಾರಗಳಿಂದ ಮೂಲ ಬೃಹತ್ ಕಥೆಯ ಸ್ವರೂಪವನ್ನು ತಕ್ಕಮಟ್ಟಿಗೆ ಊಹಿಸಬಹುದು. ರಾಮಾಯಣ ಮಹಾಭಾರತಗಳಂತೆ ಬೃಹತ್ಕಥೆಯೂ ಸಕಲ ಜನಪ್ರಿಯವಾಗಿದ್ದು, ಮುಂದಿನ ಮಹಾಕಾವ್ಯಗಳಿಗೆ ಮಹಾಖನಿಗಳಾದುವು.

---

1. Introduction to Staviravalicharita P. VII

ಈ ಬೃಹತ್ಕಥೆಯ ಸೆರಗಿನಲ್ಲಿಯೇ ಪಂಚತಂತ್ರ ಹಿತೋಪದೇಶ ಭೇತಾಳ ಪಂಚವಿಂಶತಿಕಥೆಗಳು ರೂಪತಾಳಿ, ಪ್ರಪಂಚದ ಮೂಲೆ ಮೂಲೆಗಳಲ್ಲಿ ಹರಡಿದುವು. ಕ್ರಿ.ಪೂ. ನಾಲ್ಕೈದನೆಯ ಶತಮಾನಗಳಿಂದ ಭರತ ಖಂಡಕ್ಕೂ ಪಾಶ್ಚಾತ್ಯ ಮತ್ತು ಮಧ್ಯ ಏಷಿಯಾದ ದೇಶಗಳಿಗೂ ವಾಣಿಜ್ಯ ಹಾಗೂ ಸಾಂಸ್ಕೃತಿಕ ಸಂಬಂಧವಿದ್ದುದರಿಂದ ಅನೇಕ ಕಥೆಗಳು ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಹರಿದಾಡಿರಬೇಕು. ತಂದೆ ಮಕ್ಕಳ ಕಾಳಗದ ಕಥೆ ಭಾರತೀಯ ಸಾಹಿತ್ಯದಲ್ಲಿರುವಂತೆ ಪಾರ್ಸಿ ಸಾಹಿತ್ಯದಲ್ಲಿದೆ. ಜೆಸ್ರೊರೋಮನೋರಂ ಎಂಬ ಜರ್ಮನಿಯ ಪುರಾಣ ಕಾವ್ಯದಲ್ಲಿ, ದಕ್ಷಿಣ ಸ್ಲೊವಾಕಿಯಾದ ಕಥೆಗಳಲ್ಲಿ ಚಂದ್ರಹಾಸನನ್ನು ಹೋಲುವ ಕಥೆಗಳು ದೊರೆಯುತ್ತವೆ.[1] ಇಂಥ ಅನೇಕ ಕಥೆಗಳು ಹಲವು ನಾಡುಗಳಲ್ಲಿ ಪಿತ್ರಾರ್ಜಿತ ಆಸ್ತಿಗಳಂತೆ ಭಾಸವಾಗುತ್ತವೆ. ಇವು ಎಲ್ಲಿಯವೆಂದು ನಿಷ್ಕೃಷ್ಟವಾಗಿ ಹೇಳುವುದು ಕಷ್ಟವಾಗುತ್ತದೆ. ಹುಲಿಯ ಚರ್ಮವನ್ನು ಹೊದ್ದ ಕತ್ತೆಯ ಕಥೆ ಜಾತಕ ಕಥೆಗಳಲ್ಲೆಂತೋ ಈಸಫ್‌ನ ನೀತಿಕಥೆಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ.[2] ಬೌದ್ಧಮತ ಪ್ರಚಾರಕರು ಯೂರೋಪು ಖಂಡಕ್ಕೆ ಹೋಗಿ[3], ಅಲೆಕ್ಸಾಂಡರನ ಸೈನಿಕರು ಇಲ್ಲಿಗೆ ಬಂದು, ಈ ಯಾತಾಯಾತ ಕಾರ್ಯ ಹಿಂದಿನಿಂದ ನಿರಂತರವಾಗಿ ಸಾಗಿದೆಯೆಂದು ಹೇಳಬಹುದು.

ಬೌದ್ಧ ಮತ್ತು ಜೈನಮತಗಳ ತೀವ್ರವಾದ ಮತ್ತು ಸ್ಪರ್ಧಾಮೂಲವಾದ ಪ್ರಚಾರಕಾರ್ಯದ ಪರಿಣಾಮವಾಗಿ ಭಾರತೀಯ ಕಥಾ ಸಾಹಿತ್ಯ ನವಚೈತನ್ಯವನ್ನು ಪಡೆದು, ಬಹುಮುಖವಾಗಿ ಬೆಳೆಯಿತು. ಬುದ್ಧ ಸಾಮಾನ್ಯ

---

1. ಸಂಭಾವನೆ: ಚಂದ್ರಹಾಸನ ಕಥೆ–ಅದರ ಪ್ರಸಾರ: ಪುಟ 241–247

2. A History of Indian Literature, Vol. 2 by M. Winternitz PP 126–127.

3. Buddhist missionaries as is well known carried the teachings of the master far and wide. Their presence in Alexandria in 2nd Century B.C. is a well established fact and so one may mention paranthetically the Buddhist monks in the north of Europe: The Ocean of Story, Vol. III by Dr. M. Gaster.

ಜನರೊಡನೆ ಕಲೆತು, ಅವರಿಗೆ ತತ್ತ್ವೋಪದೇಶಮಾಡುವಾಗ ಜಾನಪದ ಕಥೆಗಳು ಅನಿವಾರ್ಯವಾಗಿ ಜಾತಕಗಳಲ್ಲಿ ಮತ್ತು ಮುಂದಿನ ತ್ರಿಪಿಟಕಗಳಲ್ಲಿ ಸೇರಿಕೊಂಡಿರಬೇಕು.[1] ಜೊತೆಗೆ ಬೌದ್ಧಭಿಕ್ಷುಗಳು ಸಮಾಜದ ಎಲ್ಲ ಹಂತಗಳಿಂದ ಆರಿಸಿದವರಾದ್ದರಿಂದ, ಅವರು ತಮಗೆ ತಿಳಿದಿದ್ದ ಕಥೆ ಉಪ ಕಥೆ ಖಂಡ ಕಥೆಗಳನ್ನೆಲ್ಲ ತತ್ತ್ವಬೋಧೆಗಾಗಿ ಬಳಸಿಕೊಂಡರು. ಜೊತೆಗೆ ಪ್ರಾಣಿಕಥೆ, ಕಲ್ಪನಾಕಥೆ, ಪರಿಕಥೆ, ಅದ್ಭುತಕಥೆ, ದಂತಕಥೆಗಳನ್ನು ಹೆಣೆದರು. ಜೈನರು ಸಹ ಬೌದ್ಧರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಭವಾವಳಿಗಳ ನಿರೂಪಣೆಗಾಗಿ, ಸಮ್ಯಕ್ತ್ವದರ್ಶನ, ಪಂಚಾಣು ವ್ರತ ಅಷ್ಟಾಂಗಗಳ ವ್ಯಾವರ್ಣನೆಗಾಗಿ ಹಳೆಯ ವೈದಿಕ ಲೌಕಿಕ ಕಥೆಗಳನ್ನು ಅಳವಡಿಸಿಕೊಂಡದ್ದಲ್ಲದೆ ನೂರಾರು ಹೊಸ ಕಥೆಗಳನ್ನು ಸೃಷ್ಟಿಸಿದರು.[2] ಹೀಗೆ ಜೈನಕಥಾ ಸಾಹಿತ್ಯ ವಿಪುಲವಾಗಿ ಬೆಳೆಯಿತು.

ಸಾಮಾನ್ಯವಾಗಿ ಪ್ರಾರಂಭಕಾಲದ ಜೈನ ಸಾಹಿತ್ಯವೆಲ್ಲ ಮಾಗಧಿ ಮತ್ತು ಮಹಾರಾಷ್ಟ್ರೀ ಭಾಷೆಗಳಲ್ಲಿದೆ. ಕಾಲಕ್ರಮೇಣ ಸಂಸ್ಕೃತ ಅಪಭ್ರಂಶಗಳ ಜೊತೆಗೆ ಗುಜರಾಥಿ, ಕನ್ನಡ, ತಮಿಳು ಮೊದಲಾದ ದೇಶಭಾಷೆಗಳಲ್ಲಿ ಜೈನ ಗ್ರಂಥಗಳು ವಿಪುಲವಾಗಿ ರಚನೆಗೊಂಡುವು. ಮೊದಮೊದಲು ರಚಿತವಾದ ಆಚಾರಾಂಗ ಕಲ್ಪ ಸೂತ್ರಗಳಲ್ಲಿ ಮಹಾವೀರ ನೇಮಿ ಪಾರ್ಶ್ವರಿಗೆ ಸಂಬಂಧಿಸಿದ ಜೀವನ ವೃತ್ತಾಂತಗಳೂ, ಕೆಲವು ಇತಿಹಾಸ ಪುರುಷರ ಜೈನಯತಿಗಳ ಉಪಾಖ್ಯಾನಗಳೂ ಬರುತ್ತವೆ. ಅನಂತರ ಶಾಸ್ತ್ರಗ್ರಂಥಗಳನ್ನು ಕುರಿತ ನಿರ್ಯುಕ್ತಿಗಳೂ, ಆರಾಧನಾ ಗ್ರಂಥಗಳೂ ಜೊತೆಗೆ ಪುರಾಣಗಳೂ ಪ್ರಕಾಶಕ್ಕೆ ಬಂದು ಪುರಾಣಗಳಲ್ಲಿ ಅರುವತ್ತುಮೂವರು ಶಲಾಕಾಪುರುಷರ ಉಪಾಖ್ಯಾನ

---

1. Brihatkathakosha : Introduction by Dr. A. N. Upadhye : Page I5.

2. More than the Buddhists, the Jainas were at pains to appropriate to themselves all the favourite popular themes from Brahmanical and general Indian literature so as to be in a position thus to offer their adherents within the fold of their own religious community, all that they could find elsewhere too. (A. History of Indian Literature, Vol II. 486)

ಗಳೂ, ಮುನಿಸುವ್ರತ ಮತ್ತು ನೇಮಿನಾಥರ ಸಮಕಾಲೀನರಾದ ರಾಮ ಕೃಷ್ಣರ ಕಥೆಗಳೂ, ಸಗರ ವಸುದೇವರ ಆಖ್ಯಾನಗಳೂ ಬರುತ್ತವೆ. ಹರಿಭದ್ರನ ಧೂರ್ತಾಖ್ಯಾನ ಮತ್ತು ಹರಿಷೇಣನ ಧರ್ಮಪರೀಕ್ಷೆಯಂಥ ಚಮತ್ಕಾರ ಪ್ರಧಾನವಾದ ಪ್ರಚಾರ ಧ್ಯೇಯದ ಮತೀಯ ಗ್ರಂಥಗಳೂ, ಜೊತೆಜೊತೆಗೆ ಅನೇಕ ಕಥಾ ಸಂಕಲನಗಳೂ[1] ಜೈನಮತದ ಸರ್ವೋತ್ತಮತೆಯನ್ನು ಎತ್ತಿ ಹಿಡಿದಿವೆ.

ಜೈನ ಕಥೆಗಳಿಗೆಲ್ಲ ಪ್ರಮುಖವಾದ ಆಕರವೆಂದರೆ ಶಿವಾರ್ಯನಿಂದ[2] ವಿರಚಿತವಾದ ಭಗವತೀ ಆರಾಧನಾ[3] ಎಂಬ ಪವಿತ್ರ ಗ್ರಂಥ, ಮತ್ತು ಅದರ ಮೇಲೆ ಹುಟ್ಟಿರುವ ವ್ಯಾಖ್ಯಾನಕೃತಿಗಳು.[4] ಆರಾಧನಾಗ್ರಂಥ ಜೈನ ಶೌರ ಸೇನಿಯಲ್ಲಿದ್ದು ೨೧೭೦ ಗಾಹೆಗಳನ್ನೊಳಗೊಂಡಿದೆ. ಈ ಗಾಹೆಗಳ ವಿವರಣೆ ಗಾಗಿ ಅನೇಕ ಕಥಾಕೋಶಗಳು ಸಂಗ್ರಹವಾಗಿವೆ. ಶ್ರೀಚಂದ್ರ (೧೧ನೆಯ ಶತಮಾನ)ನ ಅಪಭ್ರಂಶ ಭಾಷೆಯ ಕಥಾಕೋಶ, ಪ್ರಭಾಚಂದ್ರನಿಂದ (೧೧ ನೆಯ ಶತಮಾನ) ಸಂಸ್ಕೃತ ಗದ್ಯದಲ್ಲಿ ರಚಿತವಾದ ಕೋಶ, ಸಂಸ್ಕೃತ ಪದ್ಯದಲ್ಲಿ ಸಿಕ್ಕಿರುವ ನೇಮಿದತ್ತನ (೧೬ನೆಯ ಶತಮಾನ) ಮತ್ತು ಹರಿ ಷೇಣನ ಬೃಹತ್ಕಥಾಕೋಶ ಅವುಗಳಲ್ಲಿ ಮುಖ್ಯವಾದುವು.[5]

---

1. ಬೃಹತ್ಕಥಾಕೋಶದ ಮುನ್ನುಡಿಯಲ್ಲಿ ಡಾ॥ ಎ.ಎನ್. ಉಪಾಧ್ಯೆಯವರು ಸುಮಾರು ಹದಿನಾರು ಕಥಾಕೋಶಗಳನ್ನು ಕುರಿತು ವಿವರಣೆ ನೀಡಿದ್ದಾರೆ (ಪುಟ 39-47) ಇವುಗಳ ಜೊತೆಗೆ ಇನ್ನು ಕೆಲವು ಕಥಾ ಸಂಕಲನಗಳು ಜಿನರತ್ನಕೋಶ ದಲ್ಲಿ ಉಲ್ಲೇಖಗೊಂಡಿವೆ. ಜೈನಸಾಹಿತ್ಯದ ಇತಿಹಾಸವನ್ನು ಓದಬಯಸುವವರು A History of Indian Literature vol II by M. Winternitz ಮತ್ತು ಡಾ॥ ಉಪಾಧ್ಯೆಯವರ ಬೃಹತ್ಕಥಾಕೋಶದ ಮುನ್ನುಡಿಯನ್ನು ಅತ್ಯವಶ್ಯ ವಾಗಿ ಗಮನಿಸಬೇಕು.

2. ಇವನು ಕುಂದಕುಂದಾಚಾರ್ಯನಿಗಿಂತ ಮುಂಚೆಯುವನಿರಬೇಕೆಂದು ಡಾ॥ ಉಪಾಧ್ಯೆಯವರು ಊಹಿಸುತ್ತಾರೆ. (ಬೃಹತ್ಕಥಾಕೋಶದ ಮುನ್ನುಡಿ ಪುಟ 55)

3. ಜಿನರತ್ನಕೋಶದಲ್ಲಿ ಇತರ ಆರಾಧನಾಗ್ರಂಥಗಳ ವಿಷಯ ಸಿಗುತ್ತದೆ.

4. ಇವು ನಾಲ್ಕಿವೆಯೆಂದು ಡಾ॥ ಉಪಾಧ್ಯೆಯವರ ಮತ (ಬೃಹತ್ಕಥಾ ಕೋಶದ ಮುನ್ನುಡಿ : ಪುಟ 55-57) ಇವು ಸಂಸ್ಕೃತದಲ್ಲಿವೆ. ಇವುಗಳ ಜೊತೆಗೆ ಪ್ರಾಕೃತಭಾಷೆಯ ವ್ಯಾಖ್ಯಾನವೊಂದಿರಬೇಕೆಂದು ಊಹಿಸುತ್ತಾರೆ. (ಪುಟ 58)

5. ಕನ್ನಡದ ವಡ್ಡಾರಾಧನೆಯೂ ಈ ಗುಂಪಿಗೆ ಸೇರುತ್ತದೆ.

ಜನರ ಮನಸ್ಸನ್ನಾಕರ್ಷಿಸಿ, ಒಲಿಸಿಕೊಳ್ಳಬೇಕಾದರೆ ಕಥೆಯಂಥ ಸಾಧನ ಮತ್ತೊಂದಿಲ್ಲವೆಂದೂ, ನೂರಾರು ಸೂತ್ರಗಳು ಭಾಷಣ ಸಂಭಾಷಣೆಗಳು ಮಾಡಲಾರದ ಕಾರ್ಯವನ್ನು ಒಂದೇ ಒಂದು ಕಥೆ ಪರಿಣಾಮಕಾರಿಯಾಗಿ ಮಾಡಬಲ್ಲುದೆಂದೂ ಜೈನ ಸನ್ಯಾಸಿಗಳು ಮನಗಂಡಿದ್ದರು. ಈ ಎಲ್ಲ ಕಥೆಗಳ ಪ್ರಧಾನೋದ್ದೇಶ ಜೈನಧರ್ಮದ ಸರ್ವೋತ್ತಮತೆಯ ಪ್ರತಿಷ್ಠಾಪನೆ. ನಾನಾ ಭವಾವಳಿಗಳಲ್ಲಿ ತೊಳತೊಳಲಿ ಉಪಸರ್ಗಗಳನ್ನನುಭವಿಸಿ, ಪರೀಷಹಗಳನ್ನೆದುರಿಸಿ ಕೊನೆಗೆ ಸಮ್ಯಕ್ತ್ವದರ್ಶನ ಪಂಚಾಣುವ್ರತಗಳ ಮೂಲಕ ಪರಮಸಿದ್ಧಿಯನ್ನು ಪಡೆಯುವ ಆತ್ಮನ ಮಹಾವಿಜಯ ಯಾತ್ರೆ ಅನೇಕ ಕಥೆಗಳ ವಸ್ತುವಾಗಿದೆ. ಈ ವಸ್ತು ಸ್ವರೂಪ ಅನಿವಾರ್ಯವಾಗಿ ವಿಶಿಷ್ಟವಾದ ಕಥಾತಂತ್ರವನ್ನು ರೂಪಿಸುತ್ತದೆ. ಆದ್ದರಿಂದಲೇ ಒಂದರೊಳಗೊಂದು ಕಥೆ ಹೊರಕೆ ಹೊರಕೆಯಾಗಿ ಬಂದು ತಾಂತ್ರಿಕ ಜಟಿಲತೆಗೆ ಅವಕಾಶವಾಗುತ್ತದೆ. ಕರ್ಮ ಜನ್ಮಾಂತರ ತತ್ವಗಳ ನಿರೂಪಣೆಗೆ, ಪುಣ್ಯಪಾಪಗಳ ಫಲಾಫಲ ವಿವರಣೆಗೆ, ನೀತಿಬೋಧೆಗೆ, ತತ್ವೋಪದೇಶನೆಗೆ, ವೈರಾಗ್ಯ ಪ್ರಚೋದನೆಗೆ ಈ ತಂತ್ರ ಆಚಾರ್ಯರ ದೃಷ್ಟಿಯಲ್ಲಿ ಯುಕ್ತವಾಗಿ ಕಂಡಿರಬೇಕು. ಈ ಕಥೆಗಳಲ್ಲಿ ಇಂದ್ರಜಾಲವಿದ್ಯೆಗೆ ಯಕ್ಷಿಣಿಗೆ ವಿಶೇಷಸ್ಥಾನವಿದೆ; ಗಗನಗಾಮಿನೀ ವಿದ್ಯೆ, ಪರ್ಣಲಘು ವಿದ್ಯೆ, ಅವಧಿಜ್ಞಾನ, ಅವಲೋಕಿನೀ ವಿದ್ಯೆ ಮೊದಲಾದ ಅತಿಮಾನುಷವ್ಯಾಪಾರಗಳಿಗೆ ಪ್ರಾಧಾನ್ಯವಿದೆ. ಬೇರೆ ಮತಗಳಲ್ಲಿ ದೊರೆಯದ ಐಹಿಕಾಮುಷ್ಮಿಕಸಿದ್ಧಿ ಜಿನಧರ್ಮದಲ್ಲಿ ದೊರೆಯುತ್ತದೆಂಬ ವಿಚಾರ ಅನಿವಾರ್ಯವಾಗಿ ಏಕತಾನವಾಗಿ ಎಲ್ಲ ಕಥೆಗಳಲ್ಲಿಯೂ ಬರುತ್ತದೆ. ಆದ್ದರಿಂದ ಭಿನ್ನ ಮತಗಳ ತತ್ವಸ್ವರೂಪವನ್ನು ಕುರಿತ ನೀರಸವ್ಯಾಖ್ಯೆ ತರ್ಕಗಳು ಸರ್ವತ್ರ ತಾಂಡವವಾಡುತ್ತವೆ. ಸಮಕಾಲೀನ ಸಮಾಜದ ರೀತಿನೀತಿಗಳೂ, ಹುಳುಕು ಕೊಳಕುಗಳೂ, ಏರುಪೇರುಗಳೂ ಆಚಾರ ವಿಚಾರಗಳೂ ಸಂಪ್ರದಾಯ ಪದ್ಧತಿಗಳೂ ಆಗಾಗ್ಗೆ ಸುಳುಹುದೋರುತ್ತವೆ. ಎಂಥ ಲೌಕಿಕ ಕಥೆಯಾಗಲೀ ವೈದಿಕ ಕಥೆಯಾಗಲೀ ಅದಕ್ಕೆ ಜೈನಧರ್ಮದ ಬಣ್ಣ ಬಳಿದು ಸ್ವಯಾರ್ಜಿತ ಆಸ್ತಿಯೆಂಬ ಭಾವನೆ ಬರುವಂತೆ ಮಾರ್ಪಡಿಸುವ ಕೌಶಲ ಆ ಕಥೆಗಾರರಲ್ಲಿದೆ. ಮೊದಲೇ ವೈದಿಕ ಕಥೆಗಳಲ್ಲಿ ಅಭಿನಿಷ್ಟವಾಗಿದ್ದ ಜನ ಮನಸ್ಸನ್ನು ಜಿನಧರ್ಮದ ಕಡೆಗೆ ತಿರುಗಿಸುವುದಕ್ಕಾಗಿ ಆ ಕಥೆಗಳ ಸ್ವೀಕರಣ

ರೂಪಾಂತರಗಳು ಅಗತ್ಯವಾದುವು. ಹರಿಭದ್ರ ಸಮರಾಇಚ್ಚಕಹಾದ ಪ್ರಾರಂಭವಲ್ಲಿ ಕಥೆಗಳನ್ನು ಅರ್ಥಕಥಾ, ಕಾಮಕಥಾ, ಧರ್ಮಕಥಾ ಮತ್ತು ಸಂಕೀರ್ಣಕಥಾ ಎಂದು ನಾಲ್ಕು ಭಾಗವಾಗಿ ವರ್ಗೀಕರಿಸುತ್ತಾನೆ. ಇವು ಗಳಲ್ಲಿ ಸಹನೆ ಸಂಯಮ ದಯೆ ಅಹಿಂಸೆ ಅಪರಿಗ್ರಹ ಅಸ್ತೇಯ ವಾತ್ಸಲ್ಯ ಸತ್ಯ ಮೊದಲಾದ ಸದ್ಗುಣಗಳನ್ನೂ ಪಂಚಾಣುವ್ರತಗಳನ್ನೂ ನೋಂಪಿ ಗಳನ್ನೂ ವಿವರಿಸುವಂಥ ಧರ್ಮಕಥೆಯೇ ಅತ್ಯಂತ ಶ್ರೇಷ್ಠವಾದದ್ದೆಂದು ತಿಳಿಸುತ್ತಾನೆ. ಈ ಕಥೆಗಳಲ್ಲಿ ಬರುವ ಜನ ಪಾಪಕೃತ್ಯವನ್ನೆಸಗಿದರೆ ಪ್ರಾಣಿ ವರ್ಗದಲ್ಲಿ ಹುಟ್ಟುತ್ತಾರೆ; ಅನಂತರ ಪುಣ್ಯಕಾರ್ಯವನ್ನೆಸಗಿ ವ್ರತದೀಕ್ಷೆಗಳ ಮೂಲಕ ದೈವಗತಿ ಪಡೆಯುತ್ತಾರೆ. ಈ ಕಥೆಗಳಲ್ಲಿ ಆಧುನಿಕ ಸಣ್ಣ ಕಥೆಗಳ ತಂತ್ರಕೌಶಲವಾಗಲೀ ಪ್ರಾರಂಭ ಅಥವಾ ಪರಿಣಾಮ ರಮಣೀಯತೆ ಯಾಗಲೀ ವಿಶ್ವರೂಪದರ್ಶನವಾಗಲೀ ಕಾಣುವುದಿಲ್ಲ, ನಿಜ. ಆದರೆ ಅವು ತತ್ಕಾಲೀನ ಸಮಾಜದ ಮನೋಭೀಷ್ಟವನ್ನು ಪೂರೈಸಿದ್ದಲ್ಲದೆ ಬೇರೆ ಸಮಾಜ ಗಳಲ್ಲಿ ನಡೆದ ಸಾಹಿತ್ಯಸೃಷ್ಟಿಗೂ ಸ್ಫೂರ್ತಿ ನೀಡಿದುವು.

ಪೂರ್ವೋಕ್ತ ಕಥಾಕೋಶಗಳಲ್ಲೆಲ್ಲ ಹರಿಷೇಣನ ಬೃಹತ್ಕಥಾ ಕೋಶವೇ ಅತ್ಯಂತ ವಿಸ್ತಾರವಾದದ್ದು. ಅದರಲ್ಲಿ ೧೫೭ ಕಥೆಗಳಿವೆ; ೧೨೫೦೦ ಶ್ಲೋಕಗಳಿವೆ. ಇದಕ್ಕೆ ಭಗವತೀ ಆರಾಧನಾ ಗ್ರಂಥದ ಪ್ರಾಕೃತ ವ್ಯಾಖ್ಯಾನವೊಂದು ಆಧಾರವಾಗಿರಬೇಕೆಂದು ವಿದ್ವಾಂಸರು ಊಹಿಸುತ್ತಾರೆ.[1] ಭಾರತೀಯ ಸಾಹಿತ್ಯದಲ್ಲಿ ಹರಿಷೇಣ ಎಂಬ ಹೆಸರಿನ ಕವಿಗಳು ಇವನೂ ಸೇರಿ, ಆರು ಜನರಿದ್ದಾರೆ.[2] ಅವನು ಮೊದಲಿಗೆ ಕರ್ಣಾಟಕದ ವರ್ಧಮಾನ ಪುರದಲ್ಲಿ ಪುನ್ನಾಡ ಸಂಘಕ್ಕೆ ಸೇರಿದವನೆಂದು ಪ್ರತೀತಿಯಿತ್ತು. ಕಾಠಿ ವಾಡದ ವರ್ಧಮಾನಪುರದವನೆಂದೂ, ೯೩೧–೯೩೨ರಲ್ಲಿ ಈ ಕೃತಿಯನ್ನು ಮುಕ್ತಾಯಗೊಳಿಸಿದನೆಂದೂ ಈಗ ತೀರ್ಮಾನವಾಗಿದೆ.[3]

---

1. ಬೃಹತ್ಕಥಾಕೋಶದ ಮುನ್ನುಡಿ : ಪುಟ 111.
2. ಅದೇ ಪುಟ 117–118
3. ಅದೇ ಪುಟ 121

ಜೈನಸಾಹಿತ್ಯದಲ್ಲಿ ಮತ್ತೊಂದು ಹೆಮ್ಮೆಯ ಹೆಸರೆಂದರೆ ಸೋಮದೇವ[1] ಅವನು ಧಾರವಾಡ ಸಮೀಪದ ಗಂಗಾಧಾರ ಎಂಬ ಸ್ಥಳದಲ್ಲಿ ಯಶಸ್ತಿಲಕ ಚಂಪೂಗ್ರಂಥವನ್ನು ೯೫೯ರಲ್ಲಿ ಬರೆದು ಮುಗಿಸಿದನು.[2] ಹತ್ತು-ಹನ್ನೊಂದನೆಯ ಶತಮಾನಗಳಲ್ಲಿ ಮುಳುಗುಂದದ ಸುತ್ತಮುತ್ತಣ ಪ್ರದೇಶ ಜೈನಮತದ ಕಾರ್ಯಚಟುವಟಿಕೆಗಳಿಗೆ ಕೇಂದ್ರವಾಗಿತ್ತೆಂಬ ವಿಷಯ ಚರಿತ್ರೆ ಶಾಸನಗಳಿಂದ ತಿಳಿಯುತ್ತದೆ. ಜೈನಸಾಹಿತ್ಯ ಆ ಪ್ರದೇಶದಲ್ಲಿ ಮುಗಿಲು ಮುಟ್ಟಿದಂತೆ ತೋರುತ್ತದೆ. ಬಹುಶಃ ಸೋಮದೇವ ಪಂಪ ಪೊನ್ನ ಮೊದಲಾದ ಕನ್ನಡ ಕವಿಗಳ ಸಮಕಾಲೀನನಾಗಿದ್ದಂತೆ, ಅವರ ಪರಿಚಯವನ್ನು ಪಡೆದಿದ್ದಂತೆ ಊಹಿಸಬಹುದಾಗಿದೆ. ಸೋಮದೇವ ಅಂಥ ವರಕವಿಯಲ್ಲವೆಂದು ಹ್ಯಾಂಡಿಕಿಯವರೆ ತಿಳಿಸುತ್ತಾರೆ (ಪುಟ ೨೦). ಆದರೆ ಯಶಸ್ತಿಲಕ ಚಂಪು ವಿಶ್ವಕೋಶದಂತಿದ್ದು ಸಂಸ್ಕೃತ ಭಾಷೆಯಲ್ಲಿ ವಿಶಿಷ್ಟ ಮಾನ್ಯತೆಯನ್ನು ಪಡೆದಿದೆ.

ಸುಪ್ರಸಿದ್ಧವಾದ ಯಶೋಧರ_ಅಮೃತಮತಿಯರ ಕಥೆಯೇ ಈ ಕಾವ್ಯದ ಪ್ರಧಾನವಸ್ತು. ಎಂಟನೆಯ ಶತಮಾನದವನೆನ್ನುವ ಹರಿಭದ್ರನ ಸಮರಾಇಚ್ಚಕಹಾ ಮತ್ತು ಉದ್ಯೋತನ ಕುವಲಯಮಾಲಾ ಎಂಬ ಪ್ರಾಕೃತ ಚಂಪೂ ಕಾವ್ಯಗಳ ಮಾದರಿಯ ಮೇಲೆ ಈ ಕಾವ್ಯ ರೂಪಪಡೆದಿರುವಂತೆ ಕಾಣುತ್ತದೆ.[3] ಆಸ್ಥಾನ ಜೀವನ, ರಾಜಕೀಯ ಸಮಸ್ಯೆಗಳು, ಮಂತ್ರಿಗಳ ಭ್ರಷ್ಟಾಚಾರ,[4] ವೈದ್ಯ ಪದ್ಧತಿ, ಸ್ತ್ರೀಯರಿಂದೊದಗುವ ವಿಪತ್ತುಗಳು, ಜೈನಮತದ ತತ್ತ್ವಗಳು, ವೈಶೇಷಿಕ ಬೌದ್ಧ ವೇದಾಂತ ಚಾರ್ವಾಕ ಪಾಶುಪತ ಶೈವ ಕಾಪಾಲಿಕ ಮಾರ್ಗಗಳನ್ನು ಕುರಿತ ಖಂಡನೆ, ಯಜ್ಞ

---

1. ಸೋಮದೇವನ ಸಂಬಂಧವಾದ ವಿಷಯಗಳನ್ನು K. K. Handiqui ಅವರು ಬರೆದಿರುವ Yasastilaka and Indian Culture ಎಂಬ ಉತ್ಕೃಷ್ಟ ಗ್ರಂಥದಿಂದ ಆರಿಸಿಕೊಂಡಿದೆ.

2. ಅವನ ಮತ್ತೊಂದು ಗ್ರಂಥ ' ನೀತಿ ವಾಕ್ಯಾಮೃತ '

3. Yasastilaka and Indian Culture : Page 86.

4. ಮಂತ್ರಿಗಳು ಅಮೂಲ್ಯಲೋಹದ ವಿಗ್ರಹಗಳನ್ನು ಕರಗಿಸಿ, ಅವುಗಳ ಸ್ಥಾನದಲ್ಲಿ ಕ್ಷುದ್ರಲೋಹದ ಪ್ರತಿಮೆಗಳನ್ನಿಡುತ್ತಿದ್ದರಂತೆ (ಅದೇ ಪುಟ 118)

ಯಾಗಾದಿಗಳ ನಿಂದೆ, ಮಾರಿ ಮಸಣೆಯರ ಅವಹೇಳನ, ಮಥುರೆಯ ಜೈನ ಸ್ತೂಪ ನಿರ್ಮಾಣ ಸಂಗತಿ ಇನ್ನೂ ಎಷ್ಟೆಷ್ಟೋ ವಿಷಯಗಳು ಅಲ್ಲಿ ಅಡಕವಾಗಿವೆ. ಸಮ್ಯಕ್ತ್ವದರ್ಶನ ಮತ್ತು ಅದರ ಎಂಟು ಅಂಗಗಳನ್ನು ಕಥೆಗಳ ಮೂಲಕ ವಿವರವಾಗಿ ನಿರೂಪಿಸಿದ್ದಾನೆ (ಆರನೆಯ ಮತ್ತು ಏಳನೆಯ ಅಧ್ಯಾಯಗಳಲ್ಲಿ).[1] ಹಿಂದಿನ ಗ್ರಂಥಗಳಲ್ಲಿ ಅತ್ಯಲ್ಪವಾಗಿ ಕೇವಲ ಸೂಚ್ಯವಾಗಿ ತೋರುತ್ತಿದ್ದ ಪ್ರಚಾರೋತ್ಸಾಹ ಮತ್ತು ಪರಮತ ಖಂಡನೆಗಳು ಇಲ್ಲಿ ಸುವ್ಯಕ್ತವಾಗಿ ಬಹು ಪ್ರಮಾಣದಲ್ಲಿ ಗೋಚರವಾಗುತ್ತವೆ.[2]

ಸಾಮಾನ್ಯವಾಗಿ ಹತ್ತನೆಯ ಶತಮಾನದಲ್ಲಿ ಪ್ರಾರಂಭವಾದ ಮತೀಯ ಚಳುವಳಿ ಬರಬರುತ್ತ ಉಗ್ರವಾಗತೊಡಗಿತು. ಲಾಕುಳ ಪಾಶುಪತ ಮತ್ತು ಕಾಳಾಮುಖ ಶೈವರ ಪ್ರಭಾವದ ಪರಿಣಾಮವಾಗಿ ಜನ ಜೈನಮತವನ್ನು ನಿರ್ಲಕ್ಷಿಸಿ, ಹೊಸಮತವನ್ನು ಸ್ವಾಗತಿಸುತ್ತಿದ್ದರು. ಜೈನ ಮಠಗಳೆಲ್ಲ ಕಾಲಕ್ರಮೇಣ ಶೈವಮಠಗಳಾಗುತ್ತಿದ್ದುವು.[3] ಜಿನಮಂದಿರಗಳೆಲ್ಲ ಶಿವಾಲಯಗಳಾಗುತ್ತಿದ್ದುವು. ಅದನ್ನು ಸಹಿಸದ ಜೈನ ಕವಿಗಳು ಉರಿದೆದ್ದು ವಿಡಂಬನಾತ್ಮಕವಾದ ಕಾವ್ಯಗಳನ್ನು ಬರೆದರು. ಹರಿಭದ್ರನ ಧೂರ್ತಾಖ್ಯಾನ (8ನೆಯ ಶತಮಾನ-ಭಾಷೆ ಪ್ರಾಕೃತ)ದ ಮಾದರಿಯಲ್ಲಿ ರಚಿತವಾದ ಅಮಿತಗತಿಯ (೧೦೧೪) ಧರ್ಮಪರೀಕ್ಷೆಯೂ[4] (ಪ್ರಾಕೃತ), ಹರಿಷೇಣನ (೯೮೮) ಧರ್ಮಪರೀಕ್ಷೆಯೂ (ಅಪಭ್ರಂಶ) ಅನಿವಾರ್ಯವಾಗಿ ಅನ್ಯಮತಖಂಡನೆಯ ಕಾವ್ಯಗಳಾಗಿ ತಲೆದೋರಿದುವು.

---

1. ಆರನೆಯ ಅಧ್ಯಾಯದ ಎಂಟು ಕಥೆಗಳೂ ಪರಂಪರಾಗತವಾಗಿ ಹರಿದು ಬಂದಿವೆ. ಸಮಂತಭದ್ರನ ರತ್ನಕರಂಡಕ ಶ್ರಾವಕಾಚಾರದಲ್ಲಿ ಅವು ಸೂಕ್ಷ್ಮವಾಗಿ ಕಾಣಿಸಿಕೊಳ್ಳುತ್ತವೆ. ಕುಂದಕುಂದಾಚಾರ್ಯ (ಕ್ರಿ.ಶ. ಒಂದನೆಯ ಶತಮಾನ)ರಲ್ಲಿ ಭವ್ಯಸೇನನ ಕಥೆ ಬರುತ್ತದೆ (ಅದೇ ಪುಟ 429)

2. ಅದೇ ಪುಟ 326

3. 1055 ರಲ್ಲಿ ಧಾರವಾಡ ಜಿಲ್ಲೆಯ ಬಂಕಾಪುರದಲ್ಲಿ ಅಸ್ತಿತ್ವದಲ್ಲಿದ್ದ ಜೈನ ಮಹಾವಿದ್ಯಾಲಯವೊಂದು ಕೆಲವು ದಿನಗಳಲ್ಲಿಯೇ ಲಿಂಗಾಯತ ಮಠವಾಗಿ ಪರಿವರ್ತನೆ ಹೊಂದಿತಂತೆ (ಅದೇ ಪುಟ 349)

4. ವೃತ್ತವಿಲಾಸ (1160)ನ ಧರ್ಮಪರೀಕ್ಷೆ ಇದರ ರೂಪಾಂತರ.

ಹೀಗೆ ದಕ್ಷಿಣ ಭಾರತ, ಅದರಲ್ಲಿಯೂ ಕರ್ಣಾಟಕ ಮತೀಯ ಕಲಹದ ಕುಲುಮೆಯಲ್ಲಿ ಬೇಯುತಿದ್ದಾಗ ನಯಸೇನ ಪೂರ್ವೋಕ್ತ ಗ್ರಂಥಗಳ ಮಾದರಿಯಲ್ಲಿ ಧರ್ಮಾಮೃತವನ್ನು ರಚಿಸಿದನು. ಅಲ್ಲಿಯ ಎಲ್ಲ ಕಥೆಗಳಿಗೂ ಪೂರ್ವಾಚಾರ್ಯರ ಕೃತಿಗಳೇ ಆಧಾರ. ಹಳೆಯ ಕಥೆಗಳನ್ನುಪಯೋಗಿಸಿ ಕೊಂಡು, ಹೆಚ್ಚು ಮಾರ್ಪಾಡುಗಳಿಲ್ಲದೆ, ನಾವೀನ್ಯವನ್ನು ತೋರಿಸಿ ಸ್ವಾರಸ್ಯ ವನ್ನು ಹೆಚ್ಚಿಸುವ ಸಲುವಾಗಿ ಹೊಸ ಹೊಸ ಉಪಮಾರೂಪಕಗಳನ್ನು ಗಾದೆ ಗಳನ್ನು ಹೇರಳವಾಗಿ ತುಂಬುತ್ತ, ಕಾವ್ಯವನ್ನು ರಚಿಸಿದ್ದಾನೆ. ತನ್ನ ಕಥಾ ಗುಚ್ಛಕ್ಕೆ ಅವನು ಆರಿಸಿಕೊಂಡಿರುವ ಕಥೆಗಳು ಕೇವಲ ಹದಿನಾಲ್ಕು. ಅವು ಗಳಲ್ಲಿ ಹಲವು ಹರಿಷೇಣನ ಬೃಹತ್ಕಥಾಕೋಶದಲ್ಲಿ ದೊರಕುವುದಾದರೂ, ಅವನು ಸೋಮದೇವನ ಯಶಸ್ತಿಲಕಚಂಪೂ ಕಾವ್ಯವನ್ನು ಕಣ್ಮುಂದಿರಿಸಿ ಕೊಂಡಿದ್ದಾನೆಂದು ನಿಸ್ಸಂಶಯವಾಗಿ ಹೇಳಬಹುದು.

ಅನುಪಮ ಗುಣನಿಳಯರ್ಮೇ
ದಿನಿಪೂಜ್ಯಸೋಮದೇವಪಂಡಿತರಮಳರ್
ಮುನಿವೃಷಭರ್ವಿನತತ್ರಿಭು
ವನದೇವರ್ಬುಧವನಜವನ ಕಳಹಂಸರ್ ೧-೧೯

ಈ ಸೋಮದೇವ ಯಶಸ್ತಿಲಕವನ್ನು ಬರೆದವನೇ ಇರಬೇಕು. ಅವನು ನಯಸೇನನ ಕಾಲಕ್ಕಾಗಲೇ ಮೇದಿನೀ ಪೂಜ್ಯನಾಗಿರಬೇಕು. ಅವನ ಕೃತಿ ನಯಸೇನನಿಗೆ ಮಾದರಿಯಾಗಿರಬೇಕು. ಯಶಸ್ತಿಲಕದಲ್ಲಿ ದರ್ಶನವನ್ನು ನಿರೂಪಿಸುವ ದಯಾಮಿತ್ರಸೆಟ್ಟಿಯ ಕಥೆ ಕಾಣುವುದಿಲ್ಲ. ಮುಂದಿನ ಎಂಟು ಕಥೆಗಳೂ ಅದೇ ಕ್ರಮದಲ್ಲಿ, ಹೆಚ್ಚು ವ್ಯತ್ಯಾಸವಿಲ್ಲದೆ ಧರ್ಮಾಮೃತದಲ್ಲಿ ಬರುತ್ತವೆ. ಅಲ್ಲಲ್ಲಿ ಕಾಣುವ ಕೆಲವು ವ್ಯತ್ಯಾಸಗಳು ಗಣನೀಯವಾದುವಲ್ಲ. ಅನಂತಮತಿಯ ಕಥೆಯಲ್ಲಿ ಬರುವ ಶ್ರುತಸಾಗರನ ಹೆಸರು ಯಶಸ್ತಿಲಕದಲ್ಲಿ ಅರ್ಹದ್ದತ್ತನೆಂದಿದೆ. ಚಂದ್ರಾಭನೆಂಬ ವಿದ್ಯಾಧರರಾಜ (ರೇವತಿ ಕಥೆ) ವಟು ವಿನ ವೇಷದಿಂದ ಉತ್ತರ ಮಧುರೆಯ ಭವ್ಯಸೇನಾಚಾರ್ಯರನ್ನು ಪರೀಕ್ಷಿಸುವ ಘಟನೆ ಎರಡರಲ್ಲಿಯೂ ಬೇರೆಬೇರೆಯಾಗಿದೆ. ಒಮ್ಮೆ ವಿದ್ಯಾಧರ ರಾಜನೂ ಭವ್ಯಸೇನಾಚಾರ್ಯರೂ ಊರ ಹೊರಗೆ ತಿರುಗಾಡುತ್ತಿದ್ದಾಗ, ತನ್ನ ಐಂದ್ರ ಜಾಲಿಕ ಸಾಮರ್ಥ್ಯದಿಂದ ವಿದ್ಯಾಧರರಾಜ ಇಡೀ ನೆಲವನ್ನು ಧ್ಯಾನಾಂಕುರ

ಗಳಿಂದ ಮುಚ್ಚಿದನು. ಧಾನ್ಯಾಂಕುರದಲ್ಲಿಯೂ ಜೀವವಿದ್ದ ಸಂಗತಿ ಜೈನಾಗಮಗಳಿಂದ ತಿಳಿದಿತ್ತಾದ್ದರಿಂದ ಭವ್ಯಸೇನಾಚಾರ್ಯರು ಮುಂದೆ ಹೆಜ್ಜೆಯಿಡಲಿಲ್ಲ. ಆಗ ಕೃತ್ರಿಮವೇಷದ ವಿದ್ಯಾಧರರಾಜ ಜೀವ ಲಕ್ಷಣವಾದ ಶ್ವಾಸೋಚ್ಛ್ವಾಸ ವ್ಯಾಪಾರ ಧಾನ್ಯಾಂಕುರದಲ್ಲಿ ಕಾಣುವುದಿಲ್ಲವೆಂದು ವಾದಿಸಿ, ಆಚಾರ್ಯರು ಅದರ ಮೇಲೆ ನಡೆಯುವಂತೆ ಒಪ್ಪಿಸುತ್ತಾನೆ. ಈ ಭಾಗ ಧರ್ಮಾಮೃತದಲ್ಲಿಲ್ಲ. ಯಶಸ್ತಿಲಕ ಚಂಪೂಕಾವ್ಯದ ಜಿನೇಂದ್ರ ಭಕ್ತ ಸೆಟ್ಟಿಯ ಕಥೆಯಲ್ಲಿ ಬರುವ ಯಶೋಧ್ವಜ ಇಲ್ಲಿ ವೀರಧ್ವಜನಾಗುತ್ತಾನೆ, ಅವನ ಮಗ ಸುವೀರ ಇಲ್ಲಿ ವೀರಕುಮಾರನಾಗುತ್ತಾನೆ. ಸೋಮದತ್ತ(ವಾತ್ಸಲ್ಯದ)ನ ಕಥೆಯಲ್ಲಿ ಮಧುರೆಯಲ್ಲಿ ಜೈನಸ್ತೂಪ ಪ್ರತಿಷ್ಠಾಪಿಸಿದ ಪ್ರಸಂಗ ಬರುತ್ತದಷ್ಟೆ. ವಜ್ರಕುಮಾರ ಉತ್ತರ ಮಧುರೆಯಲ್ಲಿ ಸ್ತೂಪಸ್ಥಾಪನೆ ಮಾಡಿದಂತೆ ಯಶಸ್ತಿಲಕ ಹೇಳುತ್ತದೆ; ವಜ್ರಕುಮಾರನ ಇಷ್ಟದಂತೆ ಭಾಸ್ಕರದೇವ ದಕ್ಷಿಣ ಮಧುರೆಯಲ್ಲಿ ಜೈನಸ್ತೂಪವನ್ನು ಸ್ಥಾಪಿಸಿದಂತೆ ಧರ್ಮಾಮೃತದಲ್ಲಿ ಹೇಳಿದೆ.[1] ಸತ್ಯವ್ರತ ಅಸ್ತೇಯ ಅಪರಿಗ್ರಹ ಮೊದಲಾದ ಇತರ ಅಂಗಗಳನ್ನು ವಿವರಿಸುವ ಕಥೆಗಳು ಅಲ್ಲಿಯೇ ಬೇರೆ, ಇಲ್ಲಿಯೇ ಬೇರೆ. ಈ ಅಷ್ಟಾಂಗ ಕಥೆಗಳ ಜೊತೆಗೆ ಮದ್ಯಪಾನ ಮಾಂಸಾಹಾರಗಳನ್ನು ನಿಷೇಧಿಸುವ ಕಥೆಗಳು ಯಶಸ್ತಿಲಕದಲ್ಲಿ ಹೆಚ್ಚುವರಿಯಾಗಿ ಬರುತ್ತವೆ. ಒಂದೊಂದು ತತ್ಕಾಲೀನ ದೇಶಕ್ಕೆ ಹಲವು ಕಥೆಗಳು ರೂಢಿಯಲ್ಲಿದ್ದು ಒಂದೊಂದು ಸಂಪ್ರದಾಯದ ಕವಿಗಳು ಒಂದೊಂದು ಕಥೆಯನ್ನು ಬಳಸಿಕೊಂಡಂತೆ ಕಾಣುತ್ತದೆ. ಹರಿಷೇಣನ ಬೃಹತ್ಕಥಾಕೋಶದ ಕೆಲವು ಕಥೆಗಳಿಗೂ ಇಲ್ಲಿಯ ಕಥೆಗಳಿಗೂ ಸಾಮ್ಯ ತೋರುವುದಾದರೂ,[2] ನಯಸೇನ ಯಶಸ್ತಿಲಕ ಚಂಪೂ ಗ್ರಂಥವನ್ನು ಅನುಸರಿಸಿದ್ದಾನೆನ್ನುವುದರಲ್ಲಿ ಸಂದೇಹವಿಲ್ಲ.

ಅನೇಕ ವೈದಿಕ ಕಥೆಗಳನ್ನು ಜೈನದರ್ಶನ ನಿರೂಪಣೆಗಾಗಿ ಜೈನ ಸಂಪ್ರದಾಯದ ಚೌಕಟ್ಟಿಗೊಳಪಡುವಂತೆ ಅಳವಡಿಸಿಕೊಳ್ಳಲಾಯಿತೆಂದು

---

1. ಈ ಸಂಬಂಧವಾಗಿ ದೀರ್ಘವಿವರಣೆಯನ್ನು Yasastilaka and Indian Culture (ಪುಟ 431–434) ಎಂಬ ಗ್ರಂಥವಲ್ಲಿ ನೋಡಬಹುದು.

2. ಯಶಸ್ತಿಲಕದಲ್ಲಿ ಧನದನ ಕಥೆಯಿಲ್ಲ. ಬೃಹತ್ಕಥಾಕೋಶದಲ್ಲಿ ಈ ಕಥೆ ಬರುತ್ತದೆ (46ನೆಯ ಕಥೆ) ನಯಸೇನನ ಕಥೆಗೂ ಹರಿಷೇಣನ ಕಥೆಗೂ ಸಾಮ್ಯ

ಮೇಲೆ ಹೇಳಿದೆ. ವಿಷ್ಣುಕುಮಾರನ ಕಥೆ (ಪ್ರಭಾವನೆಯ ಕಥೆ) ವಾಮನಾವತಾರ ಕಥೆಯ ರೂಪಾಂತರ; ಧನಕೀರ್ತಿಯ ಕಥೆ ಚಂದ್ರಹಾಸನ ಕಥೆಯ ಮತ್ತೊಂದು ರೂಪ; ಲಲಿತಾಂಗನ ಕಥೆಯಲ್ಲಿ ಬರುವ ಜಮದಗ್ನಿ ಪ್ರಕರಣದ ಮೂಲ ವೈದಿಕ ಪುರಾಣಗಳಲ್ಲಿದೆ; ಪ್ರಮಾಥಿ ಕುಮಾರನ ಕಥೆಯಲ್ಲಿ ಅರ್ಜುನ ಏಕಲವ್ಯರ ಕಥೆಗಳು ಅಡಕವಾಗಿವೆ. ಇವುಗಳ ಜೊತೆಗೆ ಪಂಚತಂತ್ರದಲ್ಲಿ ಬರುವ ಶಿವಭೂತಿಯ ಕಥೆಯನ್ನು ಅಸ್ತೇಯ ವ್ರತದ (ಜಿನದತ್ತನ) ಕಥೆಯಲ್ಲಿ ಕಾಣಬಹುದು.

ಧರ್ಮಾಮೃತದ ಎಲ್ಲ ಕಥೆಗಳೂ ಸಾಮಾನ್ಯವಾಗಿ ಹಿಂದಿನ ಜೈನ ಪುರಾಣಗಳಲ್ಲಿಯೋ ಕಥಾಕೋಶಗಳಲ್ಲಿಯೋ ಕಾಣುತ್ತವೆಂಬುದನ್ನು ಮೇಲೆ ಸ್ಪಷ್ಟಪಡಿಸಿದೆ. ಅವುಗಳಲ್ಲಿ ಎಷ್ಟು ಕಲ್ಪಿತವೋ ಎಷ್ಟು ನಡೆದದ್ದೋ ಹೇಳಲಾಗುವುದಿಲ್ಲ. ಕೆಲವಕ್ಕಾದರೂ ಚಾರಿತ್ರಕ ಹಿನ್ನೆಲೆಯಿರಬಹುದೆಂದು ಧನದನಕಥೆಯ ನಿದರ್ಶನದಿಂದ ಊಹಿಸಬಹುದಾಗಿದೆ. ಧನದನಕಥೆ ಮೇಲುನೋಟಕ್ಕೆ ಕಲ್ಪನಾಕಥೆಯಂತೆ ಪುರಾಣಕಥೆಯಂತೆ ಕಾಣಬಹುದಾದರೂ, ಅದರಲ್ಲಿ ಚರಿತ್ರೆಯ ತಿರುಳಿದೆಯೆಂದು ಶ್ರೀಮಾನ್ ಪಿ. ಬಿ. ದೇಸಾಯಿಯವರು ಸಮರ್ಥಿಸಿದ್ದಾರೆ. ಈ ಕಥೆ ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿ ಆಂಧ್ರದೇಶದಲ್ಲಿದ್ದ ಜೈನಮತದ ಪ್ರವರ್ಧಮಾನಸ್ಥಿತಿಯನ್ನು ತಿಳಿಸುತ್ತದೆಂದೂ ಭಟ್ಟಿಪ್ರೋಲು ಬ್ರಾಹ್ಮೀಪ್ರಾಕೃತಶಾಸನಗಳಲ್ಲಿ ಸ್ತುತ್ಯನಾಗಿರುವ ಕುಬೇರಕನೇ ಧನದನೆಂಪೂ, ಈಗಿನ ಚಂದವೊಲು ಹಿಂದೆ ಧನದಪುರವಾಗಿದ್ದು ಧನದನಿಂದ ಸ್ಥಾಪನೆಯಾಯಿತೆಂದೂ, ನಯಸೇನನ ಕಥೆಯಲ್ಲಿ ವ್ಯಕ್ತವಾಗುವ ಭೌಗೋಳಿಕ ರಚನೆ ಕ್ರಿಸ್ತಪೂರ್ವ ಮೂರನೆಯ ಶತಮಾನದ ಆಂಧ್ರಪ್ರದೇಶದ ಪ್ರಕೃತ ಭೂಭಾಗಕ್ಕೆ ಸಂವಾದಿಯಾಗಿದೆಯೆಂದೂ ಅವರು ಸವಿವರವಾಗಿ ನಿರೂಪಿಸಿ

---

ವಿದೆ. ಜೊತೆಗೆ ವೈಷಮ್ಯವೂ ಇದೆ. ಆದ್ದರಿಂದ ಎರಡಕ್ಕೂ ಮೂಲ ಬೇರೆಯಿರಬೇಕೆಂದು ಶ್ರೀಮಾನ್ ಪಿ. ಬಿ. ದೇಸಾಯಿಯವರು ಹೇಳುತ್ತಾರೆ :

'I am inclined to believe that Nayasena based his version of the narrative on a tradition different from Harishena's and that the Brihatkatha Kosa did not form his main Source—Jainism in South India (Page 8)

ದ್ದಾರೆ[1]. ಶ್ರೀಮಾನ್ ದೇಸಾಯಿಯವರ ಈ ನಿರ್ಣಯ ಅವಿರೋಧವಾಗಿರುವ ತನಕ ಈ ಕಥೆಗೆ ಐತಿಹಾಸಿಕಮೂಲವಿದೆಯೆಂದಿಟ್ಟುಕೊಳ್ಳಬಹುದು.

ಒಟ್ಟಿನಲ್ಲಿ ನಯಸೇನನವರೆಗಿನ ಜೈನ ಕಥಾಸಾಹಿತ್ಯದ ಚರಿತ್ರೆಯನ್ನು ನೋಡಿದಾಗ ಎಲ್ಲೋ ಉಪಮಾರೂಪಕಗಳ ರೂಪದಲ್ಲಿ ಬಿಂದುಸದೃಶವಾಗಿ ಐತಿಹಾಸಿಕವಸ್ತುವಿನ ಒಂದು ಕಣವಾಗಿ ಪ್ರಾರಂಭವಾದ ಕಥಾವಾಹಿನಿ ಕಾಲಕ್ರಮೇಣ ಅನೇಕ ಐತಿಹ್ಯ ಉಪಕಥೆಗಳನ್ನು ಸೇರಿಸಿಕೊಂಡು ಸಿಂಧು ರೂಪವನ್ನು ತಳೆದಂತೆ ತೋರುತ್ತದೆ. ಕಥೆ ಹಳೆಯದಾದರೂ ತನಗೆ ಬೇಡ ವಾದ ಪ್ರಕರಣ ಸಂದರ್ಭಗಳನ್ನು ತ್ಯಜಿಸಿ, ತನಗೆ ಬೇಕಾದ ಕಡೆ ಘಟನೆ ಪ್ರಕರಣಗಳನ್ನು ಹಿಗ್ಗಲಿಸಿ, ಅವು ಹೆಚ್ಚು ಆಕರ್ಷಕವಾಗುವಂತೆ ಉಪಮಾ ರೂಪಕಗಳನ್ನು ತುಂಬಿ ಎಲ್ಲೆಲ್ಲು ಕನ್ನಡತನವನ್ನುಕ್ಕಿಸಿ, ಇವು ಕನ್ನಡಕ್ಕೆ ಹೊಸವೆನ್ನುವಂತೆ ತಾನು ಹಿಡಿದ ಸಾಹಿತ್ಯಮಾರ್ಗ ನಿತ್ಯನೂತನವೆಂಬಂತೆ ನಯಸೇನ ಕಾವ್ಯರಚನೆ ಮಾಡಿದ್ದಾನೆ.

೬

**ಧರ್ಮಾಮೃತದ ವೈಶಿಷ್ಟ್ಯ**: ವಸ್ತು ಕಲ್ಪನೆಯಲ್ಲಿ, ಕಥಾ ಸಂವಿಧಾನ ದಲ್ಲಿ ನಯಸೇನನದೆನ್ನಬಹುದಾದ ವೈಶಿಷ್ಟ್ಯ ಅಷ್ಟಾಗಿ ಎದ್ದು ಕಾಣುವುದಿಲ್ಲ. ಅವನು ಬಳಸಿರುವ ಮಾಲೋಪಮೆಗಳಲ್ಲಿ[2] ಈ ಕಾವ್ಯದ ವೈಶಿಷ್ಟ ಮಿನುಗು ತ್ತಿದೆ. ಕನ್ನಡ ಸಾಹಿತ್ಯದಲ್ಲಿ ಇವನಷ್ಟು ಪ್ರಮಾಣದಲ್ಲಿ ಉಪಮೆಗಳನ್ನು ಬಳಸಿರುವ ಕವಿಗಳು ವಿರಳ. ಉಪಮಾರೂಪಗಳ ಸೃಷ್ಟಿ ಪ್ರತಿಭಾವಂತ ಕವಿಯಿಂದ ಮಾತ್ರ ಸಾಧ್ಯ. ಚರಾಚರ ವಸ್ತುಗಳಲ್ಲಿರುವ ಸಾದೃಶ್ಯಸಂಬಂಧ

---

1. Jainism in South India PP 3-9.

2. 'ಸಾಧಾರಣ ಧರ್ಮವು ಅಭಿನ್ನವಾಗಿರುವ' ಮತ್ತು ಸಾಧಾರಣ ಧರ್ಮವು ಭಿನ್ನವಾಗಿರುವ ಅನೇಕ ಉಪಮಾನಗಳನ್ನು ಒಂದೇ ಉಪಮೇಯದ ವರ್ಣನೆಗಾಗಿ ಕಲ್ಪಿಸುವುದೇ ಮಾಲೋಪಮೆ'–ಕನ್ನಡ ಕಾವ್ಯ ಪ್ರಕಾಶ, ಸಂಪುಟ ೭, ಪುಟ ೧೮೧ (ಡಾ॥ ಕೃಷ್ಣಮೂರ್ತಿ) 'ಸಾಧರ್ಮ್ಯಮುಪಮಾಭೇದೇ....' 'ಏಕಸ್ಯೈವ ಬಹೂಪ ಮಾನೋಪಾದಾನೇ ಮಾಲೋಪಮಾ'–ಕಾವ್ಯಪ್ರಕಾಶ, ೧೦ನೆಯ ಉಲ್ಲಾಸ. ಈ ಸಂದರ್ಭದಲ್ಲಿ ಕುವೆಂಪು ಅವರ 'ಮಹೋಪಮೆ' ಎಂಬ ಲೇಖನವನ್ನು ಓದಬಹುದು.

ವನ್ನು ಗುರುತಿಸುವ, ಅದು ಓದುಗರ ಕಲ್ಪನಾನೇತ್ರದ ಮುಂದೆ ಮೂರ್ತರೂಪ ದಲ್ಲಿ ನಿಲ್ಲುವಂತೆ ಬಣ್ಣಿಸುವ ಸಾಮರ್ಥ್ಯ ಋಷಿಸದೃಶನೂ ಕ್ರಾಂತ ದರ್ಶಿಯೂ ಆದ ಕವಿಗೆ ಮಾತ್ರ ಸಹಜ. ಉಪಮೆ ಇರುವುದು ಉಪಮೇ ಯದ ಹೆಗ್ಗಳಿಕೆಗಾಗಿ. ಉಪಮೇಯದ ಭಾವಾರ್ಥರಸಗಳು ಪುಷ್ಟಿಗೊಳ್ಳು ವಂತೆ, ಅವು ಭಾವುಕರಿಗೆ ಸುಲಭ ಗ್ರಾಹ್ಯವಾಗುವಂತೆ ಸಹಾಯ ಮಾಡು ವುದೇ ಉಪಮೆಯ ಕಾರ್ಯ. ಉಪಮೇಯದ ಗರ್ಭದಲ್ಲಡಗಿರುವ ರಹಸ್ಯ ವನ್ನು ಭೇದಿಸುವ ಕ್ಷಕಿರಣ ಉಪಮೆ ; ಉಪಮೇಯದ ಭಾವರಸಗಳನ್ನು ಸಹೃದಯನ ಮನಸ್ಸಿಗೊಯ್ಯುವ ಪ್ರಣಾಳಿಕೆಯದು. ಸಾದೃಶ್ಯದ ಮೂಲಕ ಮಾತ್ರವಲ್ಲ, ವೈದೃಶ್ಯದ ಮೂಲಕವೂ ಉಪಮೆ ಉಪಮೇಯದ ಸೊಗಸನ್ನು ಹೆಚ್ಚಿಸುತ್ತದೆ. ಉಪಮೇಯವನ್ನು ಸರ್ವಾಂಗವಾಗಿ ಪುಷ್ಟಿಗೊಳಿಸುವ ಉಪಮೆ ಸಾರ್ಥಕವಾಗುತ್ತದೆ. ಅದರ ಪುಷ್ಟಿಗೆ ನೆರವಾಗದೆ, ತನ್ನ ಹೆಚ್ಚು ಗಾರಿಕೆಯನ್ನು ಮೆರೆಯುವುದಾದರೆ ನಿರರ್ಥಕವಾಗುತ್ತದೆ. ರಾಜನ ಶಕ್ತಿ ಸಾಮರ್ಥ್ಯಗಳನ್ನು ಪ್ರಕಾಶ ಪಡಿಸುವಂಥ ಮಂತ್ರಿ ಸೇನಾಧಿಪತಿಗಳು ಸರ್ವ ಮಾನ್ಯರಾಗುತ್ತಾರೆ. ಅವನನ್ನು ಮೂಲೆಗೊತ್ತಿ ಮೆರೆಯುವ ಪರಿವಾರ ತ್ಯಾಜ್ಯವಾಗುತ್ತದೆ. ಕಥೆಯ ಕ್ರಿಯೆ ಘಟನೆಗಳಿಗೆ ಉಪಮೇಯ ವಿಧೇಯ ವಾಗಿರಬೇಕು ; ಉಪಮೆ ಉಪಮೇಯಕ್ಕೆ ವಿಧೇಯವಾಗಿರಬೇಕು.

ಇಂಥ ಉಪಮೆಗಳನ್ನು ಸೃಷ್ಟಿಸುವ ಕವಿ ಪ್ರತಿಭಾವಂತನಾಗಿರಬೇಕು. ಶಬ್ದ ಶ್ರೀಮಂತನಾಗಿರಬೇಕು. ಅಪಾರವಾದ ಲೋಕಾನುಭವ, ಸೂಕ್ಷ್ಮ ಗ್ರಹಣ ಸಾಮರ್ಥ್ಯ, ಸಂವೇದನ ಪಟುತ್ವವುಳ್ಳ ಕವಿ ಮಾತ್ರ ಅತ್ಯುಜ್ವಲ ವಾದ ಶಬ್ದ ಚಿತ್ರಗಳನ್ನು ನಿರ್ಮಿಸಲು ಶಕ್ತನಾಗುತ್ತಾನೆ. ಇವುಗಳ ಜೊತೆಗೆ ಇವುಗಳಿಗಿಂತ ಮಿಗಿಲಾಗಿ ಕವಿಯಲ್ಲಿ ಔಚಿತ್ಯಪ್ರಜ್ಞೆಯಿರಬೇಕು. ಔಚಿತ್ಯ ಪ್ರಜ್ಞೆಯಿಲ್ಲದ ಪ್ರತಿಭೆ ಸಮರ್ಥಸವಾರನಿರದ ಸೊಕಳಾಶ್ವದಂತಾಗುತ್ತದೆ. ಔಚಿತ್ಯಪ್ರಜ್ಞೆ ಹೊರತಾಗಿ ಉಳಿದೆಲ್ಲ ಗುಣಗಳು ನಯಸೇನನಲ್ಲಿ ಯಥೇಚ್ಛೆ ವಾಗಿವೆ. ಯಾವುದು ಗುಣವಾಗಿ ಕವಿಯನ್ನು ಮೆರೆಸಬೇಕಾಗಿತ್ತೊ ಅದೇ ದೌರ್ಬಲ್ಯವಾಗಿ ಅವನನ್ನು ಮರಸುವಂತಾಗಿದೆ. ಅಮೃತವಾದರೂ ಅತಿಯಾದರೆ ವಮನಕಾರಿಯಾಗುತ್ತದೆ. ಅವನ ಉಪಮೆಗಳ ಅಟ್ಟಹಾಸದ ಮೆರವಣಿಗೆಯಲ್ಲಿ ಉಪಮೇಯ ನಾಚಿಕೆಯಿಂದ ಮರೆಯಾಗುತ್ತದೆ. ಉಪಮೆ

ಗಳ ಗೊಂಡಾರಣ್ಯದಲ್ಲಿ ಮರೆಯಾದ ಉಪಮೇಯದ ಜಾಡು ಗುರುತಿಸು ವುದು ಕಷ್ಟವಾಗುತ್ತದೆ. ನಯಸೇನನ ಉಪಮೆಗಳಲ್ಲಿ ಬಹುಭಾಗ ಸ್ವಂತದ ವಾದರೂ, ಅವುಗಳ ಪ್ರಯೋಗ ಬಾಹುಳ್ಯಕ್ಕೆ ಅವುಗಳ ಉಬ್ಬರಕ್ಕೆ ಸುಬಂಧು ಬಾಣಾದಿಗಳೂ, ಮುಖ್ಯವಾಗಿ ಸೋಮದೇವನೂ ಅವನಿಗೆ ಆದರ್ಶವಾಗಿರು ವಂತೆ ಕಾಣುತ್ತದೆ.[1] ಯಶಸ್ತಿಲಕ ಕಾವ್ಯದಲ್ಲಿ ಹೆಜ್ಜೆ ಹೆಜ್ಜೆಗೂ ಮಾಲೋಪಮೆ ಗಳು ವಿಪುಲವಾಗಿ ದೊರೆಯುತ್ತವೆ. ಒಮ್ಮೊಮ್ಮೆ ಸಾಂಗತ್ಯ ಸಾಮಂಜಸ್ಯ ಗಳಿರಲಿ ಇಲ್ಲದಿರಲಿ, ಉಪಮೆಗಳ ಮಾಲೆಯನ್ನು ಹೆಣೆಯುತ್ತಾನೆ.

ಈ ಅತಿರೇಕದ ದೌರ್ಬಲ್ಯವನ್ನು ಕ್ಷಣಕಾಲ ಮರೆಯುವುದಾದರೆ ನಯಸೇನ ಎಂಥ ಪ್ರತಿಭಾಶಾಲಿ ಎಂಬುದು ವೇದ್ಯವಾಗುತ್ತದೆ. ಇವನಂಥ ವಸ್ತು ಪರಿಚಯ ಜ್ಞಾನವುಳ್ಳ, ಲೋಕಾನುಭವವುಳ್ಳ, ಸೂಕ್ಷ್ಮಗ್ರಹಣ ಸಾಮರ್ಥ್ಯವುಳ್ಳ ಕವಿ ಕನ್ನಡ ಸಾಹಿತ್ಯದಲ್ಲಿ ಬೇರೊಬ್ಬನಿಲ್ಲವೆಂಬ ಭಾವನೆ ವಾಚಕರಲ್ಲಿ ಮೂಡದಿರಲಾರದು. ಎಂಥ ಗಹನವಾದ ತತ್ತ್ವವನ್ನಾದರೂ ಸೂಕ್ಷ್ಮವಾದ ಭಾವವನ್ನಾದರೂ ಉಪಮೆಗಳ ಮೂಲಕ ಎಂಥ ಸಾಮಾನ್ಯ ನಿಗಾದರೂ ಸಾರ್ಥಕವಾಗುವಂತೆ ಪರಿಣಾಮಕಾರಿಯಾಗಿ ತಿಳಿಸಬಹುದೆಂಬ ರಹಸ್ಯವನ್ನು ನಯಸೇನ ಚೆನ್ನಾಗಿ ಮನಗಂಡಿದ್ದನು. ಆಂಜನೇಯ ಯಾವುದೋ ಒಂದು ಮೂಲಿಕೆಗಾಗಿ ಸಂಜೀವನ ಪರ್ವತವನ್ನೇ ಹೊತ್ತು ತಂದು ಸುಷೇಣನ ಮುಂದಿರಿಸಿದಂತೆ ಕವಿ ಓದುಗರ ಮುಂದೆ ಉಪಮೆಗಳ ರಾಶಿಯನ್ನೊಡ್ಡಿದ್ದಾನೆ. ಇಡೀ ಲೋಕವೇ ಅವನ ಪ್ರತಿಭಾಲಿಂಗನಕ್ಕೆ ವಶವಾಗಿ ಅಂತರ್ನಿಹಿತವಾದ ಉಪಮಾ ಸಂಪತ್ತನ್ನು ತೆರೆದಿಟ್ಟಂತಿದೆ. ಅವನ ದೃಷ್ಟಿ ಹರಿದೆಡೆ ಕಲ್ಪನೆ ಚಿಗಿದೆಡೆ ಉಪಮಾರೂಪಕಗಳು ತಾವಾಗಿಯೇ ಕಾಣಿಸಿಕೊಳ್ಳುತ್ತವೆ. ಎಲ್ಲಿಯೂ ಅವನು ಉಪಮೆಗಳಿಗೆ ತಿಣುಕಿದಂತೆ ಕಾಣುವುದಿಲ್ಲ; ಒಮ್ಮೊಮ್ಮೆ ಅವು ಅವನ ಮೈಮೇಲೆ ಬಂದಂತೆ ಭಾಸವಾಗು ತ್ತದೆ.

---

1. ಕೇವಲ ದಿಗ್ದರ್ಶನಾರ್ಥವಾಗಿ ಈ ಒಂದು ಮಾಲೋಪಮೆಯನ್ನು ಗಮನಿಸಬಹುದು: ಮರುಮಾರ್ಗ ಇವ ಛಾಯಾಪಾದಪೇನ, ಛಾಯಾಪಾದಪ ಇವ ಜಲಾಶಯೇನ, ಜಲಾಶಯ ಇವ ಕಮಲಾಕರೇಣ' ಇತ್ಯಾದಿ: ಆರನೆಯ ಅಧ್ಯಾಯ.

ಪ್ರಾಣಿಲೋಕದ ಉಪಮೆಗಳು :[1] ಜೀವದ ಮಹಾಯಾತ್ರೆಯ ಕೊನೆಯ ಮೆಟ್ಟಲೇ ಮನುಷ್ಯತ್ವವೆಂತಲೂ, ಮನುಷ್ಯತ್ವವನ್ನು ಪಡೆಯುವುದಕ್ಕೆ ಮುಂಚೆ ಅದು ಅನೇಕ ಜೀವರಾಶಿಗಳಲ್ಲಿ ಜನ್ಮ ತಾಳಿರಬೇಕೆಂತಲೂ ವೇದಾಂತಿಗಳು ಹೇಳುತ್ತಾರೆ. ವೈಜ್ಞಾನಿಕ ಸಿದ್ಧಾಂತಗಳು ಈ ಅಭಿಪ್ರಾಯಕ್ಕೆ ವಿರುದ್ಧವಾಗಿಲ್ಲ. ಸಮಸ್ತ ಜೀವಜಂತುಗಳ ಗುಣಾವಗುಣಗಳೆಲ್ಲ ವಾಸನಾರೂಪದಿಂದ ಮನುಷ್ಯನಲ್ಲಿ ಪುಂಜೀಕೃತವಾಗಿವೆ. ಪ್ರತಿಯೊಬ್ಬ ವ್ಯಕ್ತಿಯ ಸಂಸ್ಕಾರಾಭಿರುಚಿಗನುಗುಣವಾಗಿ ಈ ಗುಣಾವಗುಣಗಳ ಪ್ರಮಾಣ ವ್ಯತ್ಯಾಸವಾಗುತ್ತದೆ. ಪ್ರಪಂಚ ಸೂರ್ಯನ ಸುತ್ತ ಸುತ್ತುತ್ತಿಲ್ಲ, ಮನುಷ್ಯನ ಸ್ವಾರ್ಥದ ಸುತ್ತ ಪರ್ಯಟನ ಮಾಡುತ್ತಿದೆ. ಬಕವೃತ್ತಿ, ಶ್ವಾನಬುದ್ಧಿ, ಮರ್ಕಟ ಮನೋಧರ್ಮ, ಮಂಡೂಕ ಚರ್ಯೆ, ಸೃಗಾಲ ವರ್ತನೆ, ಸೂಕರಲುಬ್ಧತೆ—ಇವೆಲ್ಲ ಮನುಷ್ಯನಲ್ಲಿ ಮನೆ ಮಾಡಿಕೊಂಡಿರುವಂತೆ, ಅವನ ಮೈಯಲ್ಲೆಲ್ಲ ವಿಷ ತುಂಬಿಕೊಂಡಿರುವಂತೆ ಕೆಲವರಿಗೆ ಕಾಣಬಹುದು. ಈ ಆಸುರೀ ಗುಣಗಳು ಸುಸಂಸ್ಕಾರದಿಂದ ನಿವೃತ್ತವಾಗಬೇಕು. ಮನುಷ್ಯನಿಗೆ ತನ್ನ ಬೆನ್ನು ಕಾಣದು. ಬೇರೊಬ್ಬರು ಅವನ ಮನಸ್ಸಿಗೆ ಕನ್ನಡಿ ಹಿಡಿದು ಹುಳುಕು ತೋರಿಸಬೇಕು. ಈ ಕಾರ್ಯ ಕವಿಯಿಂದ ಮಾತ್ರ ಸಾಧ್ಯ. ಆದ್ದರಿಂದಲೇ ನಯಸೇನ ಮನುಷ್ಯನ ವಿವಿಧ ಪ್ರವೃತ್ತಿಗಳನ್ನು ಎತ್ತಿ ತೋರಿಸುವ ಸಲುವಾಗಿ ತನ್ನ ಸುತ್ತಮುತ್ತಣ ಪ್ರಾಣಿ ಲೋಕವನ್ನೆಲ್ಲ ಸೂರೆಗೊಂಡಿದ್ದಾನೆ. ನಾಯಿ, ಮೊಲ, ಪುಲಿ, ಸಿಂಹ, ಚಮರೀಮೃಗ, ಮೀನ್, ಪಾವು, ಭೇರುಂಡ, ಶರಭ, ಪಂದಿ, ಕೋಳಿ, ಪುಲ್ಲೆ, ಬೆಕ್ಕು, ಗೂಗೆ, ಮೊಸಳೆ, ಕಟ್ಟೆ, ತೇರಣೆ, ಕರಡಿ, ಕುಱಿ, ಎತ್ತು, ಕುದುರೆ, ಸೀಳ್ನಾಯ್, ಗಿಡುಗ, ಆಡು, (೭–೨೨೧), ಉಡು (೧೦–೨೮೭) ಈ ಎಲ್ಲ ಪ್ರಾಣಿಗಳೂ ಅವನ ಸಹಾಯಕ್ಕೊದಗುತ್ತವೆ. ನಾಯಿಯ ಕುಸಂಸ್ಕೃತಿ, ಹೀನಬುದ್ಧಿ, ವಕ್ರತೆಗಳು ಮನುಷ್ಯನಲ್ಲಿ ಹೇಗೆ ಮನೆ ಮಾಡಿಕೊಂಡಿವೆಯೆಂಬುದನ್ನು ಹಲವಾರು ಉಪಮೆಗಳ ಮೂಲಕ ತಿಳಿಸುತ್ತಾನೆ: ಅಡಕಿಲ ಮಡಕೆಗಳಂ ಸಯ್ತಿಡಲಱಿವುವೆ ನಾಯ್ಗಳೊಡೆವುವಲ್ಲದೆ

1. 'ಬಸವಣ್ಣನವರ ವಚನಗಳಲ್ಲಿ ಪ್ರಾಣಿರೂಪಕ' ಎಂಬ ಸುಜನಾ ಅವರ ಲೇಖನ ಓದಿ (ದರ್ಶನ ವಿಮರ್ಶೆ: ಪುಟ 80–115)

(೧೦-೪೮); 'ಹಾಸುಗೊಂಡ ನಾಯಂತೆ ಸಿಡಿಮಿಡಿಗೊಂಡು' (೩೪-೧೬೮); 'ನವಿಲಾಟಂ ಸೊಗಯಿಸುವುದು ವಿವೇಕಿಯಪ್ಪಂಗೆ ನಾಯ್ಗೆ ಸೊಗಸುವುದೆ' (೯-೪೭) 'ಕಳವೆಯು ಕೂಱುಮಂ ತೊವೆಯುಮಂ ತಿಳಿದುಪ್ಪಮುಮಂ ವಿನೋದದಿಂ ಗಳಿಲನೆ ನಾಯ್ಗೆ ಬೇಗವೊಸೆದಿಕ್ಕಿದೊಡೆ....' (೭-೧೬೭); 'ಇಂದ್ರಿಯ ಸುಖಂಗಳೆಂಬೊಡಿಂ ನಾಯ ಬಾಲಂ' (೮-೧೪೬); 'ನಾಯ ಕುನ್ನಿಗೆ ಕೂರ್ತು ರಾಜ್ಯಮನಿತ್ತು ಪಾಸಿನ ಮೇಲೆ ತಂದಾಯಿತಿಕ್ಕೆಯಿನೊಪ್ಪವಾಗಿರಿಸಿ....' (೧೧-೧೬೪). ಕೋಡಗದ ಸ್ವರೂಪ ಸ್ವಭಾವಗಳು ಮುಂದಿನ ಉಪಮೆಗಳಲ್ಲಿ ಅಭಿವ್ಯಕ್ತವಾಗುತ್ತವೆ[1]: 'ಸುಂಟಿತಿಂದ ಕೋಡಗದಂತುಮ್ಮಳಿಸಿ' (೧-೧೪೧): 'ಕೋಡಗಮಂ ಪುಲ್ಲೊಳ್ ಮುಚ್ಚೆ ಸಿಡಿಮಿಡಿಗೊಂಬಂತೆ' (೧-೧೫೬); ಪೂಮರನಂ ಕೋಡಗನೇಱಿದಂತೆ' (೨-೬೯); 'ದಗೆಯೇಱಿದ ಕೋಡಗದಂತೆ ಬೆಱಗಾಗಿ' (೨-೩೫) 'ಪೆಱರೇಡಿಸಲೆಂದು ಪೋಗಿ ದಸಿಯ ಮೇಲೆ ಬಿಟ್ಟು ಸತ್ತ ಕೋಡಗದಂತೆ' (೭-೯೩) 'ಸೊಡರಂ ಕಂಡ ಕೋಡಗದಂತೆ ಬೆಬ್ಬಳಿಸಿ' (೧೨-೪೧). ಮನುಷ್ಯ ಸಾಮಾನ್ಯವಾಗಿ ತನ್ನ ಸುತ್ತಮುತ್ತಲಿರುವ ಪ್ರಾಣಿಪಕ್ಷಿಗಳ ಸ್ವಭಾವವನ್ನು ಗುರುತಿಸುವುದಿಲ್ಲ; ಗುರುತಿಸಿದರೂ ಅವನಿಗದು ಮನದಟ್ಟಾಗುವುದಿಲ್ಲ. ನಯಸೇನನ ಸೂಕ್ಷ್ಮ ದೃಷ್ಟಿಯಿಂದ ಯಾವ ಪ್ರಾಣಿ ಪಕ್ಷಿಗಳೂ ತಪ್ಪಿಸಿಕೊಳ್ಳುವಂತಿಲ್ಲ. ಕಾಗೆ ಮನುಷ್ಯ ಸಹವಾಸಿ; ಆದರೆ ಅದು ಅನೇಕ ಕವಿಗಳ ಗಮನವನ್ನು ಸೆಳೆದಂತೆ ಕಾಣುವುದಿಲ್ಲ. ಈ ಕಾಗೆ ನಯಸೇನನ ಕಾವ್ಯದಲ್ಲಿ ಮೇಲಿಂದ ಮೇಲೆ ಪ್ರತ್ಯಕ್ಷವಾಗುತ್ತದೆ: 'ಕಾಗೆ ಕಂಡಱಿಯದು ಚಂದ್ರನಂ ಸಸಿಗೆ ಹೀನಮೆ' (೧-೧೧೭); 'ಕಾಗೆಯಂ ಕಂಡ ಕೋಗಿಲೆಯಂತೆ ಮಾಲೆಗಾಱರ್ಬೆರ್ಚಿ ದೆಸೆಗೆಟ್ಟು ಪರಿಯೆ' (೧-೧೮೩); 'ತೆಲ್ಲಿಗರ್ ಬಿಲ್ಲಂ ಕಂಡ ಕಾಗೆಯಂತೆ ಚೆಲ್ಲವರಿಯೆ' (೨-೬೯); 'ಕಲಸುಗೂೞಂ ಕಾಗೆ ಸುತ್ತಿದಂತೆ' (೨-೭೧); 'ಕಾಗೆಯಂತೆ ಮತಿಯಿಲ್ಲದೆ' (೨-೧೦೫). ಹೀಗೆಯೇ ಕೋಣ: 'ಬೇಸಗೆಯ ಕೋಣನಂತೆ ನಾಲಗೆಯನುರ್ಚಿ' (೧-೧೬೮); 'ಕೋಣನಂತೆ ಕದಡದೆ' (೧-೧೬೮); 'ಗರ್ಭಿಣಿಯನೆಮ್ಮೆತಗುಳ್ದಂತೆ' (೨-೭೧);

---

1. ಸ್ಥಳಾಭಾವದಿಂದ ಇವುಗಳ ವಿವರಣೆಗೆ ಕೈಹಾಕಿಲ್ಲ.

'ಕಱುಸತ್ತೆಮ್ಮೆಯಂತೊಱಲುವ' (೩-೨೦೬); 'ಬಲ್ಲಿದರೊಡ್ಡಿನಂತೆ ಮೂರ್ವಲೆವ ಕಾಡೆಮ್ಮೆಗಳಿಂ' (೩-೫೩); 'ಕೋಣಂ ಪೊಕ್ಕ ಮಡುವಿನಂತೆ ಮನದೊಳ್ ಕದಡಿ' (೧೦-೩೬). ಎಮ್ಮೆಕೋಣಗಳನ್ನು ಹತ್ತಿರದಿಂದ ನೋಡದಿದ್ದರೆ ಈ ಉಪಮೆಗಳು ಮೂಡುತ್ತಿರಲಿಲ್ಲ. ಹೀಗೆಯೇ ಇಲಿ: 'ಇಲಿಗಂ ಮರಕುಟಿಗವಕ್ಕಿಗಮಲಸದೆ ಕರ್ದುಕುತ್ತೆ ಕಡಿಯುತಿರ್ಪುದೆ ಸಹಜಂ' (೯-೪೬); 'ತುಪ್ಪದ ಕೊಡನ ಮೇಗಣಿಲಿಯಾತಂ' (೨-೪೮); 'ಬೆಳ್ಳಿಲಿಯು ಬಿಲದೊಳ್ ನೀರ್ವೊಕ್ಕಂತೆ' (೨-೭೧); 'ಬೆಲ್ಲದ ಪೇಱಿ ನಿಲಿವೊಕ್ಕಂತೆ' (೨-೭೧); 'ಸೋರೆಯೊಳಗಿಲಿಪೊಕ್ಕಂತಿರೆ' (೩-೨೦೫); 'ಬೆಳಗಿನೊಳಂ ಕಾಣದು ನಿಶಿಯೊಳ್ ಕಾಣ್ಬುದು ಹೆಗ್ಗಣಕ್ಕೆ' (೧-೧೧೬). ಒಮ್ಮೊಮ್ಮೆ ಅಸಹ್ಯವೆನಿಸಬಹುದಾದ ಉಪಮೆಗಳನ್ನು ಕವಿ ಜೋಡಿಸುತ್ತಾನೆ: 'ನರಿಯಂ ಬಡಿದೊಡೆ ಪೇಲ್ಸುರಿಗುಮಲ್ಲದೆ ಲಾಭಮಿಲ್ಲ' (೧೩-೧೨೭); 'ಎಱಗಲನಾ ಪೇಲಿರ್ದೊಡಮೆಱಗುಗುಂ' (೨-೨೨೭) ಹೀಗೆಯೇ 'ಕೋೞಿಯಂತೆ ಕೆದಕುವರ್' (3-೭೩); 'ಕೋೞಿಯಂತೆ ಕ್ರಿಮಿ ಪ್ರಿಯನಪ್ಪುದು' (೪-೧೭೫); 'ಬೇಡವಳ್ಳಿಗೆ ಪಂದಿ ಮದ್ದಾನೆಯೆಂಬಂತೆ' (೨-೨೯); 'ಬೆಳ್ವೊರಸಿನಂತೆ ಶೂನ್ಯ ಹೃದಯನಾಗಿ' (೧೧-೧೬೫); 'ಜಿಗುಳೆಯಂತೆ ನೆತ್ತರಂ ಕುಡಿವರ್' (೩-೭೩); 'ತಗುಣೆಯಂತೆ ಮೆಯ್ಯಂ ತಿಂಬರ್' (೩-೭೩) 'ಪಚ್ಚೋತಿಯಂತೆ ಪಲವುಂ ಬಣ್ಣಮಾಗಿ' (೨-೧೦೫); ಪಲ್ಲಿಯಂತೆ ಕೇರಂ ಪತ್ತುತಂ; ಕಪ್ಪೆಯಂತೆ ತಣ್ಪಪ್ಪೆಡೆಯೊಳ್ ಪತ್ತುತುಂ (೧-೧೬೦); ಪಾವಿಲ್ಲದೆಡೆಯೊಳ್ ಕಪ್ಪೆಗಳ್ ತಮ್ಮ ಗಜಱಿ ಗಜಱಾಗಿರ್ಪುವು' (೧-೧೭೪); ಬಯಲೊಳಿಕ್ಕಿದ ಮೀನಂತೆ ಮಿಡುಕಿ; (೧-೧೬೮); ಮಟದ ಬೆಕ್ಕಿನಂತೊಳಗಣ್ಗೋಡಿಯಾಡಿ (೧-೧೬೮); 'ಮದುವೆಯ ನೆರವಿಯುಂ ಕಡಂದುಱು ಕವಿದಂತೆ' (೨-೭೧); 'ಪಶುವಿನಂತೆ ಮೂತ್ರಪ್ರಿಯನಪ್ಪುದು'—ಎಂಬ ಉಪಮೆಗಳು ಅವನ ಪ್ರತ್ಯಕ್ಷಾನುಭವದಿಂದ ಮೂಡಿದುವಾಗಿರಬೇಕು.

ಲೋಕ ವ್ಯವಹಾರದ ಉಪಮೆಗಳು: ನಯಸೇನ ಮುಳುಗುಂದದ ಗುರು ಪರಂಪರೆಗೆ ಸೇರಿದ್ದು ಸನ್ಯಾಸಿಯಾಗಿದ್ದಿರಬೇಕೆಂಬ ಅಭಿಪ್ರಾಯವನ್ನು ಹಿಂದೆ ವ್ಯಕ್ತಪಡಿಸಿದೆ. ಆದರೂ ಅವನು ಲೋಕವನ್ನು ಎಷ್ಟು ಬಗೆಯಾಗಿ

ನೋಡಿದ್ದಾನೆ, ಎಷ್ಟು ಮುಖಗಳಿಂದ ನೋಡಿದ್ದಾನೆ, ಎಷ್ಟು ಸೂಕ್ಷ್ಮ ವಾಗಿ ಗ್ರಹಿಸಿದ್ದಾನೆ ಎಂಬ ವಿಷಯ ಅವನು ಕೊಟ್ಟಿರುವ ನೂರಾರು ಉಪಮೆ ಗಳಿಂದ ಸ್ಪಷ್ಟವಾಗುತ್ತದೆ. ಆ ಉಪಮಾವಾರಿಧಿಯ ಮುಂದೆ ನಿಂತಾಗ ಎಂಥವರಾದರೂ ವಿಸ್ಮಯಮೂಕರಾಗದಿರುವುದಿಲ್ಲ. ನಿದರ್ಶನಾರ್ಥವಾಗಿ ಕೆಲವೇ ಕೆಲವು ಉಪಮೆಗಳನ್ನಿಲ್ಲಿ ಸಂಗ್ರಹಿಸಿದೆ: ಕೇರಿಲ್ಲದೆ ಚಿತ್ರಮಂ ಬರೆವೆ ನೆಂಬ (೧–೬೭); ತೂಬಿಲ್ಲದೆ, ಕೆಱೆಯಂ ಕಟ್ಟುವೆನೆಂಬ (೧–೬೭); ಸಾಸಿವೆ ಗುಡಿದಂತಿರೆ (೧–೧೪೩); ಮದ್ದುಗುಣಿಕೆಯಂ ತಿಂದಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣಮಾಗಿ ತೋರ್ಪಂತೆ (೧–೧೧೮); 'ಕುದುರೆ ಯೇಱಿದ ಕುಱುಂಬನಂತೆ ನಡುಗುತ್ತುಂ (೧–೧೪೪); ಪೇನುಳ್ಳನಂತೆ ತಲೆಯಂ ತುಱಿಸುತ್ತುಂ (೧–೧೪೪); ಪತ್ತಿಯಂ ಕಿಚ್ಚು ತಗುಳ್ದಂತೆ (೨–೭೧); ಲೋಯಿಸರದ ಮೇಲೆ ಭಂಡಿ ಪರಿದಂತೆ (೨–೮೯); ಕರಟದ ಕದಿರಂತೆ ತಿಱ್ಱನೆ ತಿರುಗುತ್ತುಂ (೨–೧೧೨); ಪುಟುಮುಟ್ಟಿದ ಸಸಿಯಂತೆ ನಯಮಿಲ್ಲದೆ (೨–೧೫೫); ಎಣ್ಣೆ ಮುಟ್ಟಿದ ಕುಂಬಳ ಕಾಯಂತೆ ಒಳಗೊಳಗೆ ಕೊಬಿ‍ತು (೩–೩೫); ಎರೆಯ ಕೆಱೆಯಂತೆ ಮೊಗಂ ನೀರೋಡುತ್ತುಂ (೩–೪೬) ಬೇವಿನ ಕುಸುಮಾಮೋದಂ ಪೊರ್ದಲ್ಕೆ ಕಯ್ಪೆಯಕ್ಕುಂ ತೋಯಂ (೪–೧೨೯); ಕಲ್ಲದೋಣಿಯುನೇಱಿ ಬಂದ ತೊಱೆಯೊಳ್ ಪೋಪೆನೆಂಬನುಂ (೭–೩೭); ಪೇಲಿಂಗೆ ನೊಣಂಗಳ್ ಕಡುಸೋಲದಿನೆಱಗು ವುವು (೭–೬೮); ಕೆರಪಂ ತಲೆಗೇರಿಸಿಕೊಳ್ವರೆ (೯–೨೧೦); ಚಿತ್ತೆಯ ಸರಿ ಯಂತಿರೆ (೯–೨೩೫) ಇತ್ಯಾದಿ.

ಪ್ರಕೃತಿ ಸಂಬಂಧವಾದ ಉಪಮೆಗಳು: ಉಪಮಾಸೃಷ್ಟಿಯಲ್ಲಿ ನಯಸೇನ ನಿಸರ್ಗದ ವ್ಯಾಪಾರಗಳನ್ನು ಸಾಕಷ್ಟು ಪ್ರಮಾಣದಲ್ಲಿ ಬಳಸಿ ಕೊಂಡಿಲ್ಲ; ಪ್ರಕೃತಿಯ ಕಡೆ ಅವನ ಗಮನ ಹರಿದಂತೆ ಕಾಣುವುದಿಲ್ಲ. ಬಳಸಿರುವ ಕೆಲವು ಉಪಮೆಗಳೂ ಚರ್ವಿತಚರ್ವಣವಾಗಿವೆ; ಅವುಗಳಲ್ಲಿ ನಾವೀನ್ಯವಿಲ್ಲ: ಧೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ (೨–೬೯); ತಾವರೆಗೊಳನಂ ಮಂಜು ಪೊಕ್ಕಂತೆ (೨–೭೧); ಶಶಿಕಿರಣಂ ಗಳೆಂತು ಕುಮುದಾಳಿಗಳಂ ರವಿರಶ್ಮಿಯೆಂತು ರಂಜಿಸುವ ಸಹಸ್ರಪತ್ರ ನಿಕುರುಂಬಮನೊಪ್ಪಲಲರ್ಚಿ ನಾಡೆ ಸಂತಸಮನೆ ಮಾಳ್ಪುವಂತೆ(೨–೮೬);

ನಯಮುಳ್ಳುದಱಿಂ ಚಂದ್ರೋದಯದೊಳ್ ಬೆಳಗುವುವು ತಾರೆ ಸೂರ್ಯೋದಯದೊಳ್ ಭಯದಿಂದದೃಶ್ಯಮಪ್ಪುವು (೨-೮೭); ಅಳಿನಿಕುರುಂಬಮಶೋಕೆಯ ತಳಿರಂ ಮುಸುಕುವವೊಲ್ (೨-೧೪೬); ಸೂರ್ಯಂಗೋರಂತಿರೆ ತೀವ್ರೋಷ್ಣಮೊಪ್ಪುಗುಂ (೬-೨೨); ತಂಗಾಳಿಯ ಪೊರ್ದುಗೆಯಿಂ ನಯಂಬಡೆದೆಳಲತೆಯಂತೆ (೭-೨೫). ಈ ಉಪಮೆಗಳಲ್ಲಿ ಭಾವದ ಕಾವಿಲ್ಲ; ಆಲೋಚನೆಯ ಗಹನತೆಯಿಲ್ಲ; ಇವು ಜಾಳು, ಬೋಳು, ಸಪ್ಪೆ.

ಪೌರಾಣಿಕೋಪಮೆಗಳು: ಜೈನ ಪುರಾಣೇತಿಹಾಸಗಳಿಂದ ಆಯ್ದ ಉಪಮೆಗಳ ಜೊತೆಗೆ ವೈದಿಕ ಪುರಾಣೇತಿಹಾಸಗಳಿಂದಲೂ ಕವಿ ಉಪಮೆಗಳನ್ನು ಸಂಗ್ರಹಿಸುತ್ತಾನೆ. ಈ ಉಪಮೆಗಳೂ ಅಷ್ಟು ಸಾರವತ್ತಾಗಿಲ್ಲ, ಅವನಿಗೆ ಹೇಳಿ ಬಂದುದಲ್ಲ. ನಾರಾಯಣ ಸಿರಿಯೊಡನೆ, ಅಮರಾಧೀಶ್ವರ ರಂಭೆಯ ಜೊತೆಯಲ್ಲಿ, ರಾಘವೇಶ ಸೀತೆಯಲ್ಲಿ, ಚಿತ್ತೋದ್ಭವ ರತಿಯೊಡನೆ, ಚಂದ್ರ ರೋಹಿಣಿಯೊಡನೆ ಕೂಡಿದಂತೆ, ಧನದ ಮಹಾರಾಜ ಕಮಳಶ್ರೀಯೊಡನೆ ಕೂಡಿದನಂತೆ (೧೧-೨೨). ದರ್ಶನಶುದ್ಧಿಯಲ್ಲಿ ಶಚೀ ಮಹಾದೇವಿಯಂತೆ, ಪತಿವ್ರತಾಗುಣದಲ್ಲಿ ಪ್ರಭಾವತಿ ಸೀತೆಯರಂತೆ, ದೃಢವ್ರತದಲ್ಲಿ ಚೇಳಿನಿಯಂತೆ, ಸದ್ದರ್ಶನ ಗುರುಭಕ್ತಿಗಳಲ್ಲಿ ರುಕ್ಮಿಣಿ ಮಹಾದೇವಿ ಸುಲೋಚನೆಯರಂತೆ (೧೦-೭೧) ಬಾಳೆಂಬುದಾಗಿ ಮಗಳನ್ನು ಹರಸಿ ವಿಶಾಖೆ ಸಾಯುತ್ತಾಳೆ. ರಾವಣ ಸುಯೋಧನರು ಪರಸ್ತ್ರೀ ಲಂಪಟತ್ವಕ್ಕೆ ಪ್ರಸಿದ್ಧರಾದವರೆಂದು ಉದಾಹರಿಸುತ್ತಾನೆ (೧೩-೧೩೨, ೧೩೩).

ಸಮಾಜ ಸಂಬಂಧವಾದ ಉಪಮೆಗಳು: ಸಾಮಾಜಿಕ ರೂಢಿ ಸಂಪ್ರದಾಯಗಳನ್ನೂ, ರೀತಿನೀತಿಗಳನ್ನೂ, ಓರೆಕೋರೆಗಳನ್ನೂ, ಲೋಪದೋಷಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ನಯಸೇನ ಅನೇಕ ಉಪಮೆಗಳನ್ನು ಕಟ್ಟಿದ್ದಾನೆ. ಇವಂತೂ ಅವನ ತೀಕ್ಷ್ಣಮತಿಗೂ ಸೂಕ್ಷ್ಮಗ್ರಹಣಶಕ್ತಿಗೂ ಎತ್ತಿದ ಪತಾಕೆಗಳಾಗಿವೆ. ಇವು ಪರರಿಂದ ಕದ್ದು ತಂದುವಲ್ಲ, ಪೇಟೆಯಲ್ಲಿ ಸಾಲ ತಂದುವಲ್ಲ; ಅವು ಕವಿಯ ಅನುಭವದ ಆಳದಿಂದ ಮೂಡಿದುವು. ಅವುಗಳಲ್ಲಿ ನಾವೀನ್ಯವಿದೆ, ವೈಶಿಷ್ಟ್ಯವಿದೆ, ಸತ್ವವಿದೆ, ಹೊಗರಿದೆ; ಹೊಸ ಹೊಸ ವಾತಾವರಣವನ್ನು ಕಲ್ಪಿಸುವ, ಪರಿವೇಶವನ್ನು ನಿರ್ಮಿಸುವ ಸಾಮರ್ಥ್ಯವಿದೆ: ಬೆಲೆವೆಣ್ ಪೆಣ್ಣಂಪೆತ್ತಂತಿರೆ (೧-೧೨೭);

ಮಳೆಯಂ ಪಾರ್ವೊಕ್ಕಲಿಗನಂತೆ ಗಗನ ಮಂಡಲಮಂ ನೋಡುತ್ತುಂ (೧-೧೬೦) ; ಗರ್ಭಿಣಿಯಾದ ರಂಡೆಯಂತೆ ಬಾಯಂ ಬಿಟ್ಟು (೧-೧೬೮); ಮಂತ್ರವಾದಿಯಂ ಕಂಡ ಗ್ರಹದಂತೆ ತೆಲ್ಲಿಗರ್ ತಲ್ಲಣಿಸಿ (೨-೨೧) ಇತ್ಯಾದಿ.

ಸಂಸ್ಕೃತ ಸುಭಾಷಿತಗಳು : ನಯಸೇನ ದುರ್ಗಸಿಂಹನಂತೆ ಸಂಸ್ಕೃತ ಸುಭಾಷಿತಗಳನ್ನು ಬಹು ಸಂಖ್ಯೆಯಲ್ಲಿ ಉದ್ಧರಿಸಿ, ಸಂಸ್ಕೃತದ ಮೇಲಣ ಅಭಿಮಾನವನ್ನು ಪ್ರಕಟಗೊಳಿಸುವಂತೆಯೆ, ಆ ಮೂಲಕ ತನ್ನ ಕಾವ್ಯದ ಸೊಗಸನ್ನೂ ಗೌರವವನ್ನೂ ಹೆಚ್ಚಿಸುತ್ತಾನೆ. ಇದು ಧರ್ಮಕ್ಕೆ ಸಂಬಂಧಿಸಿದ ಕಾವ್ಯವಾದ್ದರಿಂದ ಇಂಥ ಅವತರಣಿಕೆಗಳು ಜನಮನಸ್ಸನ್ನು ಸೆಳೆಯುವ ಸಾಧನಗಳಾಗುತ್ತವೆ; ಅರ್ಥೀ ದೋಷಂ ನ ಪಶ್ಯತಿ (೧-೫೩) ; ಪುತ್ರಂ ಚ ಶಿಷ್ಯಂಚ ತಾಡಯೇನ್ನತು ಲಾಲಯೇತ್ (೧-೮೩) ; ಪರಚಿಂತಾ ಗರೀಯಸೀ (೨-೨೦೧); ಅಪುತ್ರಸ್ಯ ಗತಿರ್ನಾಸ್ತಿ (೨-೨೫) ಬಹುರತ್ನಾ ವಸುಂಧರಾ (೪-೨೧೯); ಸಂಸ್ಕಾರಶತೇನಾಪಿ ನ ಗುಂಡಃ ಕುಂಕುಮಾಯತೇ (೫-೧೬೨); ಗ್ರಾಮಯೇಕರಾತ್ರಂ ನಗರೇ ಪಂಚರಾತ್ರಮಟವ್ಯಾಂ ದಶ ರಾತ್ರಮೆಂಬ (೬-೧೯) ; ರಾಜ್ಞಾಹಿ ರಕ್ಷಿತೋ ಧರ್ಮಃ; ದುರ್ಬಲಸ್ಯ ಬಲೋ ರಾಜಾ ; ಸರ್ವೇಷಾಂ ಪಾರ್ಥಿವೋ ಗುರುಃ, ಭೃತ್ಯಾಪರಾಧಸ್ಯ ಸ್ವಾಮಿನೋ ದಂಡಂ (೯-೨೦೯) ; ಯಥಾ ರಾಜಾ ತಥಾ ಪ್ರಜಾಃ (೧೧-೧೫) ; ಪುನಃ ಶ್ವಾನೋ ಭವಿಷ್ಯತಿ (೧೧-೧೫೬); ಇಷ್ಟಂ ಧರ್ಮೇಣ ಯೋಜಯೇತ್ (೧೩-೮೬) ; ದುರಾಗ್ರಹಸ್ಯ ಹಿತೋಪದೇಶೋ ಬಧಿರಸ್ಯಾಗ್ರತೋ ಗಾನಮಿವ (೧೩-೧೪೫). ಇವುಗಳ ಜೊತೆಗೊಂದು ಪ್ರಾಕೃತ ವಾಕ್ಯವೂ ಇದೆ : ಸವಣೋ ಅವೋಘೆ ವಅಣೋ (೧೦-೧೮).

**ಗಾದೆಗಳು ಮತ್ತು ಸುಭಾಷಿತಗಳು** : 'ಗಾದೆ ವೇದಕ್ಕೆ ಸಮಾನ' ವೆಂಬ ಗಾದೆಯಿದೆ. ವೇದಪಾರಾಯಣದ ಫಲ ಗಾದೆಗಳ ಶ್ರವಣೋಚ್ಚಾರಣೆಯಿಂದ ದೊರಕುತ್ತದೆಂಬುದು ಇದರ ಅರ್ಥವಲ್ಲ. ಅದು ಪರಂಪರಾಗತವಾದ ಜ್ಞಾನದ ಮತ್ತು ಸಂಸ್ಕೃತಿಯ ಖನಿಯೆಂದೇ ಅದರ ಅರ್ಥ. ಅದು ಮಂತ್ರದಂತೆ ಹಿತಮಿತ ಸಮನ್ವಿತವಾಗಿ ಶಕ್ತಿ ಮಾತೃಕೆಯಾಗಿದೆ. ಗಾಥಾ ಎನ್ನುವ ಶಬ್ದದ ರೂಪಾಂತರವಾದದ್ದರಿಂದ ಅದು ತಾಳಲಯಬದ್ಧವಾದದ್ದು, ಶ್ರವಣ ಮನೋಹರವಾದದ್ದು. ಸುಲಭೋಚ್ಚಾರಣಾಗಮ್ಯವಾದದ್ದು, ಭಾವಾರ್ಥರಸ

ಸಮನ್ವಿತವಾದದ್ದು ಎಂಬುದಾಗಿ ಅದರ ಸ್ವರೂಪ ನಿಷ್ಕರ್ಷೆಯಾಗುತ್ತದೆ. ಅದನ್ನು ಕಟ್ಟಿದವ ಹುಟ್ಟುಕವಿ; ಆವರೆ ಕುಲಗೋತ್ರವರಿಯದ ಹೆಸರಿಗಾಗಿ ದಂದುಗಪಡೆದ ಅನಾಮಧೇಯ ಅಜ್ಞಾತ ಕವಿ. ನೂರಾರು ವರ್ಷಗಳಿಂದ ನೂರಾರು ಕಡೆಗಳಿಂದ ಹರಿದು ನೂರಾರು ಜನಮನಗಳ ಮೂಲಕ ಹಾದು, ಜರಡೆಯಾಡಿ, ಪುಟ ಹೊಂದಿ, ಭಟ್ಟಿಯಿಳಿದು, ಸಂಸ್ಕಾರಗೊಂಡ ರಸಪಾಕದ ಶುದ್ಧಗಟ್ಟಿ. 'ಜನಾಂಗದಲ್ಲಿ ಪ್ರಚಾರವಾಗಿರುವ ತಿಳಿವು ತಕ್ಕ ಮನಸ್ಸಿನಲ್ಲಿ ಬಿದ್ದಾಗ ನಾಲ್ಕು ಮಾತಿನಲ್ಲಿ ಘನಿಸಿ ಮುತ್ತಿನಂತಾಗುತ್ತದೆ. ಈ ಹಲವರ ಭಾವ ಒಬ್ಬನ ಮಾತಿನಲ್ಲಿ ಕಂಡು, ಆ ಮಾತು ಹಲವರ ಮಾತಾಗುತ್ತದೆ.'[1] ಅಂದರೆ ಅದು ಜನವಾಣಿಯೂ ಅಹುದು, ನಾಣ್ಣುಡಿಯೂ ಅಹುದು, ಯುಗ ವಾಣಿಯೂ ಅಹುದು. ಚಾಟೂಕ್ತಿಯನ್ನು ಮನೋರಸನೆಯಲ್ಲಿಟ್ಟುಕೊಂಡು ಚಪ್ಪರಿಸಿದಷ್ಟು ಅದರ ಸ್ವಾದುತ್ವ ಅಧಿಕವಾಗುತ್ತದೆ, ಕಂಪು ಪರಿಮಳಿಸುತ್ತದೆ, ಅದರ ಹುರುಳು ಹಿಗ್ಗುತ್ತದೆ, ಅದರ ವಿಶ್ವರೂಪ ದರ್ಶನವಾಗುತ್ತದೆ. ಅದು ಭಾವಾರ್ಥರಸಗಳ ಪುಷ್ಟಿ ಮಾತ್ರೆ; ಸಂಸ್ಕೃತಿಯ ಶಕ್ತಿಘುಟಿಕೆ. ಅದೊಂದು ವಿದ್ಯುದಣು. ರೂಪದಲ್ಲಿ ವಾಮನ, ಸ್ವರೂಪದಲ್ಲಿ ತ್ರಿವಿಕ್ರಮ. ಗಾದೆ ಮುಟ್ಟದ ವಸ್ತುವಿಲ್ಲ; ಚತುರ್ದಶಲೋಕಗಳಿಂದ ಕೂಡಿದ ಇಡೀ ವಿಶ್ವವೇ ಅದರ ಆಡುಂಬೊಲ. ಅದು ಅಜ್ಞಾತ ಕ್ಷೇತ್ರದಲ್ಲಿ ಹುಟ್ಟಿ ಮನೆ ಮನೆಗಳನ್ನು ಬೆಳಗುತ್ತದೆ; ವಿಶ್ವದಲ್ಲೆಲ್ಲ ಪರ್ಯಟನಮಾಡುತ್ತದೆ. ಅದರಿಂದ ತುಷ್ಟಿ ಪುಷ್ಟಿ ಬೋಧೆಗಳು ಲಭಿಸುತ್ತವೆ. ಅದರಂಥ ಪ್ರಿಯವಾದ ಮತ್ತು ಆಕರ್ಷಕವಾದ ವಸ್ತು ಪ್ರಪಂಚದಲ್ಲಿ ಮತ್ತೊಂದಿಲ್ಲ. ಶ್ರಮಾಯಾಸಗಳಿಲ್ಲದೆ, ಕುಲಗೋತ್ರ ಸ್ಥಾನಮಾನಗಳ ತಾರತಮ್ಯವಿಲ್ಲದೆ ಸರ್ವರೂ ಪಡೆಯಬಹುದಾದದ್ದು. ಅದು ಪಂಡಿತನ ರಕ್ಷಾಕವಚ, ವಾಗ್ಮಿಯ ಮಹಾಸ್ತ್ರ, ಪಾಮರನ ಪರಮ ಸಖ. ಅದರ ಮರ್ಮವನ್ನರಿತವನಿಗೆ ಅದು ಕಾಮಧೇನುವಾಗುತ್ತದೆ, ಸಂಜೀವನ ಶಕ್ತಿಯಾಗುತ್ತದೆ. ಆದ್ದರಿಂದ ವೇದದಿಂದಾಗದ ಕಾರ್ಯ ಗಾದೆಯಿಂದ ಸುಲಭ ಸಾಧ್ಯವಾಗುತ್ತಿದೆ.

ಇಡೀ ವಿಶ್ವವೇ ಗಾದೆಯ ಸಾಮ್ರಾಜ್ಯವಾದದ್ದರಿಂದ ಅದು ಬಳಸಿ

---

1. ಜನತೆಯ ಸಂಸ್ಕೃತಿ: ಮಾಸ್ತಿ ವೆಂಕಟೇಶ ಅಯ್ಯಂಗಾರ್ ಪು. 50.

ಕೊಳ್ಳುವ ವಸ್ತುಸಾಮಗ್ರಿಯ ಬಗೆಗೆ ಸೀಮಾರೇಖೆಯನ್ನೆಳೆಯುವಂತಿಲ್ಲ. ಅದರ ಸ್ಪರ್ಶಶಕ್ತಿಗೆ ನಿಲುಕದ, ಅದರ ತೀಕ್ಷ್ಣದೃಷ್ಟಿಗೆ ಸಿಗದ ಜೀವನ ವ್ಯಾಪಾರವಿಲ್ಲ. ಆದ್ದರಿಂದ ಭಾಷಾವಿಜ್ಞಾನಿ, ಸಾಹಿತಿ, ಜನಾಂಗ ಶಾಸ್ತ್ರಜ್ಞ ಮನಃಶಾಸ್ತ್ರಜ್ಞ, ಇತಿಹಾಸಕಾರ, ಸಮಾಜಶಾಸ್ತ್ರಜ್ಞ, ಪ್ರಾಣಿಶಾಸ್ತ್ರಜ್ಞ ಇತ್ಯಾದಿಯಾದ ವಿದ್ವಾಂಸರು ಗಾದೆಗಳಿಂದ ಅಮೂಲ್ಯ ಪ್ರಯೋಜನವನ್ನು ಪಡೆಯಬಹುದು. ಅನುಭವಿಸಿದಷ್ಟು ಅರೆಯಾಗದ ಬಳಸಿದಷ್ಟು ಬಡವಾಗದ ಅಕ್ಷಯ ನಿಧಿಯದು. ಒಂದೊಂದು ಗಾದೆಯಿಂದ ಒಂದೊಂದು ಕಾವ್ಯ ಹುಟ್ಟಬಹುದು ; ಹಿಂದಿನ ಜನಾಂಗದ ಆಚಾರವಿಚಾರ ಸಂಪ್ರದಾಯಗಳು ಬೆಳಕಿಗೆ ಬರಬಹುದು ; ಸಂಸ್ಕೃತಿ ನಾಗರಿಕತೆಗಳ ನಿರೂಪಣೆಗೆ ಸಹಾಯವಾಗ ಬಹುದು ; ಪ್ರಾಕ್ಕಾಲದ ನಾಗರಿಕತೆಯ ಅಭ್ಯಾಸಕ್ಕೆ ನೆರವಾಗಬಹುದು ; ಆಯಾಯ ದೇಶದ ಜೀವನ ವಿಧಾನ ಮೌಲ್ಯಗಳು, ಮೂಢ ನಂಬಿಕೆಗಳು, ವ್ರತ ನಿಯಮಗಳು, ಧ್ಯೇಯಾದರ್ಶಗಳು ಅಭ್ಯಾಸ ಅಭಿರುಚಿಗಳು ಪರಿಚಯ ವಾಗಬಹುದು, ಮೃಗಪಕ್ಷಿಗಳ ವಿವರ ದೊರೆಯಬಹುದು. ಒಟ್ಟಿನಲ್ಲಿ ಅದೊಂದು ವಿಶ್ವಕೋಶ. ಗಾದೆಗಳಲ್ಲಿ ಎಲ್ಲ ರೀತಿಯ ಭಾವ ಪ್ರದರ್ಶನಕ್ಕೂ ಅವಕಾಶವುಂಟು; ಅವುಗಳಲ್ಲಿ ನಯವಿದೆ, ನಾಜೋಕಿದೆ, ವಿನೋದವಿದೆ, ಹಾಸ್ಯವಿದೆ, ವಿಡಂಬನೆಯಿದೆ, ಶೃಂಗಾರವಿದೆ, ರೌದ್ರ ಭಯಾನಕಗಳಿವೆ, ಅಶ್ಲೀಲವಿದೆ, ಭೀಭತ್ಸವಿದೆ, ಒಗಟಿದೆ, ಉಕ್ತಿ ವೈಚಿತ್ರ್ಯವಿದೆ ; ಅತ್ಯುಕ್ತಿ ಉತ್ಪ್ರೇಕ್ಷೆಗಳಿವೆ ; ಶಬ್ದ ಸೌಷ್ಠವವಿದೆ, ಮಾಧುರ್ಯವಿದೆ, ಒಗರು ಒಗಚು ಗಳಿವೆ ; ಏನಿಲ್ಲ, ಏನುಂಟು !

ನಯಸೇನ ಎಂತು ಉಪಮಾಲೋಲನೋ ಅಂತೆಯೇ ಗಾದೆಗೀಳನೂ ಆಗಿದ್ದಾನೆ. ಅವನ ಕಾವ್ಯದಲ್ಲಿ ಕಾಣುವ ಗಾದೆಗಳ ಮುಂದೆ ಬೇರೆ ಯಾವ ಕನ್ನಡ ಕಾವ್ಯದಲ್ಲಿಯೂ ಕಾಣುವುದಿಲ್ಲ. ಕಿರಾಣಿ ಅಂಗಡಿಕಾರ ಸಂತೆಯಲ್ಲಿ ತನ್ನೆಲ್ಲ ಸರಕುಗಳನ್ನು ಹರಡಿಕೊಳ್ಳುವ ಹಾಗೆ ಇವನೂ ಗಾದೆಗಳನ್ನು ರಾಶಿಗೆಯ್ದಿದ್ದಾನೆ ; ಸಂತೆಯೇಳುವ ಹೊತ್ತಿಗೆ ಅವನು ತನ್ನೆಲ್ಲ ಸರಕುಗಳನ್ನು ಅಗ್ಗದ ಬೆಲೆಗಾದರೂ ಸರಿಯೆ ಬಿಕರಿ ಮಾಡುವಂತೆ, ಇವನೂ ಗಾದೆಗಳನ್ನು ಔಚಿತ್ಯ ಪ್ರಜ್ಞೆಯಿಲ್ಲದೆ ಧಾರಾಳವಾಗಿ ಬಳಸುತ್ತಾನೆ. ಈ ವಿಮರ್ಶೆ ಅವನ ಗಾದೆಗಳಿಗಿಂತ ಹೆಚ್ಚಾಗಿ ಅವನ ಉಪಮೆಗಳಿಗೆ ಅನ್ವಯಿಸುತ್ತದೆ, ನಿಜ.

ಏಕೆಂದರೆ ಈ ಗಾದೆಗಳು ಕವಿಯ ಸಹಜ ಪ್ರವೃತ್ತಿಗೆ ಕನ್ನಡಿ ಹಿಡಿಯುತ್ತಿವೆ; ಕಾವ್ಯಶೋಭೆಗೆ ಪೋಷಕವಾಗಿವೆ. ಇಲ್ಲಿ ಬರುವ ಕೆಲವು ಗಾದೆಗಳು ಕವಿಯ ನಿರ್ಮಾಣಶಕ್ತಿಗೆ ನಿದರ್ಶನಗಳಾಗಿವೆ ; ಬಹುಪಾಲು ಜಾನಪದ ಭಂಡಾರದ ಮುದ್ರೆಯೊಡೆದು ಸಂಗ್ರಹಿಸಿದುವಾಗಿವೆ. ಗಾದೆಗಳ ಬಳಕೆಯಿಂದ ಕವಿ, ಅರ್ಥಾಭಿವ್ಯಕ್ತಿಯನ್ನು ಸಾಧಿಸುವುದರ ಜೊತೆಗೆ ನೂತನವಾದ ಜಾನಪದ ವಾತಾವರಣವನ್ನು ಸೃಷ್ಟಿಸುತ್ತಾನೆ. ಅವನ ಅಕ್ಷಯ ತೂಣೀರದಿಂದ ಗಾದೆಗಳು ತೂರಿಬಂದುವೆಂದರೆ ಹಠಾತ್ತನೆ ಪುಟಕೆಯೊಡೆದು ಮಿಂಚು ಬಿಚ್ಚಳಿಸಿದಂತೆ, ವಿದ್ಯುತ್ ಸಂಸ್ಪರ್ಶದಿಂದ ರಂಗಮಂಟಪದ ಯವನಿಕೆ ಕ್ಷಣಾರ್ಧದಲ್ಲಿ ಸರಿದು ಹೊಸದೃಶ್ಯ ದೃಷ್ಟಿ ಗೋಚರವಾಗುವಂತೆ ಜೈನರಾಜರ ಆಸ್ಥಾನದಲ್ಲಿ ಇದ್ದಕ್ಕಿದ್ದಂತೆ ಮಾಯಭುಜಂಗ ಐಂದ್ರಜಾಲಿಕ ಶಕ್ತಿಯನ್ನು ಪ್ರದರ್ಶಿಸುವಂತೆ ಭಾಸವಾಗುತ್ತದೆ.

ಗಾದೆಗಳಂತೆ ಕಾಣುವ ಸುಭಾಷಿತಗಳೂ ನಯಸೇನನ ಕಾವ್ಯದಲ್ಲಿ ಸಲೀಲವಾಗಿ ಮಾಲೆ ಮಾಲೆಯಾಗಿ ಬರುತ್ತವೆ. ಬಾಹ್ಯಾಕಾರದಲ್ಲಿ ಸುಭಾಷಿತಗಳು ಗಾದೆಗಳಂತೆ ಕಂಡರೂ ಅಂತಸ್ಸತ್ವದಲ್ಲಿ ಎರಡೂ ಬೇರೆ ಬೇರೆಯಾಗುತ್ತವೆ. ಅವೆರಡರ ನಡುವಿರುವ ಭೇದ ತುಂಬ ತೆಳುವಾದುದು ನಿಜ; ಒಂದು ಕವಿವಾಣಿ, ಮತ್ತೊಂದು ಜನವಾಣಿ.

ಕವಿಸೃಷ್ಟಿಯ ಗಾದೆಗಳನ್ನು ಜನಸೃಷ್ಟಿಯ ಗಾದೆಗಳಿಂದ ತಕ್ಕಮಟ್ಟಿಗೆ ಬೇರ್ಪಡಿಸಬಹುದಾದರೂ, ಕಷ್ಟಸಾಧ್ಯವಾದ ಪ್ರಯತ್ನವಾಗುತ್ತದೆ. ಕವಿಸೃಷ್ಟಿಯ ಗಾದೆಗಳ ವ್ಯವಹಾರ ಸಾಮಾನ್ಯವಾಗಿ, ಅವನ ಕಾವ್ಯಗಳಿಗೆ ಸೀಮಿತವಾಗಿರುತ್ತದೆ ; ಆದರೆ ಜನಸೃಷ್ಟಿಯ ಗಾದೆಗಳು ಸನಾತನತೆಯ ಗೌರವಕ್ಕೆ ಭಾಜನವಾಗಿ, ಯುಗದಿಂದ ಯುಗಕ್ಕೆ, ಜನದಿಂದ ಜನಕ್ಕೆ ಹರಿಯುವಾಗ ಪುಷ್ಟಿಪಡೆಯುತ್ತ, ನಾಲಗೆಯಲ್ಲಿ ನಡೆದಂತೆಲ್ಲ ಸಾಣೆ ಹಿಡಿದಂತಾಗಿ ಹೊಳೆಯುತ್ತ, ನಿತ್ಯನೂತನವಾಗಿ ವಿರಾಜಿಸುತ್ತವೆ. ಕೇವಲ ನಿದರ್ಶನಾರ್ಥವಾಗಿ ಕೆಲವು ಗಾದೆಗಳನ್ನಿಲ್ಲಿ ಉದ್ಧರಿಸಿದೆ : ಪರದರೊಳ್ಮರುಳಿಲ್ಲ ಸೂಳೆ ಸಾಧುವಲ್ಲ (೧–೧೭೮)[1]; ಅಂಬರಿಗುಮಾಯುಂ ತಪ್ಪಿದೊಡೆಂಬಂತೆ

1. ಈ ಗಾದೆ ಕವಿಯ ಸೃಷ್ಟಿಯೆಂಬುದು ಅದರ ಭಾಷಾಸ್ವರೂಪದಿಂದಲೇ ಸ್ಪಷ್ಟವಾಗುತ್ತದೆ.

(೧-೨೦೬); ಮರುಳ ಪಯಣಕ್ಕೆ ತರಗೆಲೆಯೆ ಸಂಗಡಿಗನೆಂಬಂತೆ (೧-೧೯೫); ನಚ್ಚಿದೆಮ್ಮೆ ಕೋಣಸನೀದತ್ತು (೨-೧೦೩)[1]; ಕನಸಿನ ಬತ್ತಕ್ಕೆಚ್ಚತ್ತುಗೋಣಿಯಾಂತಂತೆ (೨-೧೩೨); ಮರುಳನ ಸಿರಿಯುಂ ಪಂದೆಯ ಬಿರುದುಂ ಸುಖಮಾಗಲಾಱವು (೬-೯೯); ಸೆಟ್ಟಿಯ ಮಾತೊಳ್ಳಿದುವು ಬಳ್ಳಂ ಕಿಱಿದೆಂಬಂತೆ (೭-೨೩೨); ಕೊರಲ ಸತ್ವಮಿಲ್ಲದೊರಲಂ ನುಂಗಿದರೆಂಬ ನಾಣ್ಣುಡಿಯಂತೆ (೭-೧೭೩); ಮಾತನಱಿಯದ ಸೂಳೆ ಕುಂಟಣಿಯುಂ ಬಯ್ದಳೆಂಬ ನಾಣ್ಣುಡಿಯಂತೆ (೯-೧೩೨); ಪಣ್ಣಿಂಗಿಟ್ಟೊಡೆ ಕಾಯ್ ಬಿರ್ದುದೆಂಬಂತೆ (೧೦-೧೯೫); ದಂಟನೂದುವಂಗೆ ಕೊಟಿಲ್ ದೊರೆಕೊಂಡುದೆಂಬಂತೆ (೧೦-೨೮೩); ಪುಲ್ಗುಡಿಸಿಲೊಳಿರ್ಪಂಗೆ ಮಣಿ ಮಾಡಮಾದಂತೆ (೧೦-೨೮೩); ಊರಾವುಗಳೋಡುವುದಂ ಕಂಡು ಕುರುಡಾವುಂ ಓಡಿತೆಂಬಂತೆ (೧೧-೩೫); ಪೊನ್ನೆಡೆಯೊಳ್ ನಾಯನಪ್ಪೊಡಂ ನಂಬಲಾಗದೆಂದು ನಾಣ್ಣುಡಿ (೧೨-೬೩); ಬಿಲ್ ಕೆಟ್ಟವರ್ ಕೀಲಂ ತಡವರಿಸಿದರೆಂಬಂತೆ ಕುದುರೆ ಕೆಟ್ಟವರ್ ಬಾದಣಮಂ ನೋಡಿದರೆಂಬಂತೆ (೧೨-೬೫); ಪುಣ್ಯಮುಳ್ಳರ್ ಸತ್ತಪರೇ (೧೦-೧೮೧); ಲೋಭಿಯ ಮನಮುಂ ಬಂದ ತೊಱೆಯುಂ ಶುದ್ಧಮಾಗಲಱಿಯವು (೧೨-೧೩೭); ನಿರ್ದಯರಪ್ಪ ದುರ್ಗುಣಯುತರ್ ತಾಮೊಳ್ಳಿತಂ ಮಾಳ್ಪರೇ (೧೨-೧೩೫); ಕಳ್ಗುಡಿಕಿಗಳುಂ ನಿರ್ದಯರುಂ ಮಾಡದ ಪಾಪಮಿಲ್ಲ (೧೨-೧೪೯).

೭

**ಧರ್ಮಾಮೃತದಲ್ಲಿ ಚಿತ್ರಿತವಾಗಿರುವ ಸಮಾಜಜೀವನ :** ಸಾಮಾಜಿಕ ಜೀವನಕ್ಕೆ ಸಂಬಂಧಿಸಿದ ಉಪಮೆಗಳನ್ನು ಬಳಸುವುದರಲ್ಲಿ ಕವಿ ವಿಶೇಷ ಜಾಣ್ಮೆಯನ್ನು ಪ್ರಕಟಗೊಳಿಸಿದ್ದಾನೆ. ಜೈನಮತ ಪ್ರಚಾರದ ದೃಷ್ಟಿಯಿಂದ ರಚಿತವಾದ ಈ ಕಾವ್ಯದಲ್ಲಿ ತತ್ತ್ವೋಪದೇಶಗಳ ಬಂದಿಳಿಕೆ ಹಬ್ಬಿಕೊಂಡಿದ್ದರೂ ನಡುನಡುವೆ ಕೆಲವು ಭಾವ ಪ್ರಸೂನಗಳೂ ಜನಜೀವನದ ಚಿತ್ರವನ್ನೊಳಗೊಂಡ ವಿಚಾರ ಮಂಜರಿಗಳೂ ದೊರೆಯುತ್ತವೆ. ಸಾಮಾ

1. ಈ ಗಾದೆ ಇಂದಿಗೂ ರೂಢಿಯಲ್ಲಿದೆ.

ಜಿಕ ಜೀವನ ನಿರೂಪಣೆಯಿಂದ ಹಳೆಯ ಕಥೆಗೆ ನವಚೈತನ್ಯವೊದಗಿದಂತಾಗಿದೆ. ಪುರಾಣ ಕಥೆಯ ಕಲ್ಪನಾವ್ಯಕ್ತಿಗಳೆಲ್ಲ ಜೀವಂತವಾಗಿ ಕಣ್ಮುಂದೆ ಸುಳಿದಂತಾಗಿ ಅವರು ದೂರದವರಲ್ಲವೆಂಬ ಆಪ್ತಭಾವನೆ ವಾಚಕರಲ್ಲಿ ಮೂಡುತ್ತದೆ. ಜನಮನೋಧರ್ಮವನ್ನರಿತು, ವಾಚಕಾಭಿರುಚಿಯನ್ನು ಗ್ರಹಿಸಿ, ಅವರ ಚಿತ್ತವನ್ನಪಹರಿಸುವ ರೀತಿಯಲ್ಲಿ ಕತೆಕಟ್ಟುವ ಜಾಣ್ಮೆ ನಯಸೇನನಂಥ ಜಾನಪದ ಕವಿಗೆ ಮಾತ್ರ ಮೀಸಲು. ವಿವಾಹಪೂರ್ವದಲ್ಲಿ ಕುಲಗೋತ್ರಗಳ ನಿಯಮಗಳನ್ನೆಷ್ಟು ನಿಷ್ಠುರವಾಗಿ ಪರಿಪಾಲಿಸುತ್ತಿದ್ದರೆನ್ನುವ ವಿಷಯ 'ಗೋತ್ರಮಱಿಯದೆ ಕೂಸುಗುಡುವೆನೆಂಬ' ೧-೬೨ ಎಂಬ ವಾಕ್ಯದಲ್ಲಿಂದ ಗೊತ್ತಾಗುತ್ತದೆ. ಸಮಾಜದ ಕೆಳದರ್ಜೆಯ ಜನರನ್ನು ರೈತ ಕಾರ್ಮಿಕರನ್ನು ಕವಿ ಸಹಾನುಭೂತಿಯಿಂದ ನೋಡಿ ಅವರ ಕಷ್ಟಕ್ಲೇಶಗಳಿಗಾಗಿ ಮರುಗುತ್ತಾನೆ; ಆ ಜನರ ಬಾಳಿನ ಒಂದೊಂದು ವ್ಯವಹಾರವೂ ಕಸಿಕರನೀಯವಾಗಿದೆ: 'ಸಾಕ್ಷಯಿಲ್ಲದೆ ಸಾಲಂಗೊಟ್ಟೊಕ್ಕಲಿಗನಂತೆ ಸುಯ್ಯುತ್ತುಂ (೧-೧೪೪); ಮುೞೆಯಂ ಪಾರ್ವೊಕ್ಕಲಿಗನಂತೆ ಗಗನಮಂಡಲಮಂ ನೋಡುತ್ತುಂ (೧-೧೬೦); ಮಿಂಡರ್ ದಂಡದೆತ್ತೊಕ್ಕಲಿಗನಂತಿರ್ದಗಿಡೆ[1] (೨-೬೯) ಪಿರಿದಾಗಿ ತೆಱುವ ಒಕ್ಕಲಂತೆ ನೆಲನಂ ನೋಡಿ (೩-೩೫) ಬಿನ್ನಪಂಗೆಯ್ದೊಕ್ಕಲಿಗನಂತೆ ಬಿಕ್ಕುತ್ತುಂ (೧-೧೪೪); ಆಗಿನ ಕಾಲದಲ್ಲಿ ಅಂತ್ಯಜರ ಸ್ಥಾನವೇನಾಗಿತ್ತೆಂಬ ವಿಷಯ ಕೆಳಗಣ ವಾಕ್ಯಗಳಿಂದ ತಿಳಿಯುತ್ತದೆ. ಪಿತ್ತಳೆಯ ತೊಡವು ಪೊಲೆಯರ್ಗುತ್ತಮಮೆನಿಸಿರ್ದ ಪೊನ್ನ ತೊಡವೆನಿಸುವ ಮಾೞ್ಕೆ (೪-೩೫); ಪೊಲೆಯಂಗೆ ಪೊನ್ ದೊರಕೊಂಡಂತೆ ಪೆರ್ಚಿ (೧೧-೧೫); ಪೊಲೆಯರ ತೆಱದಿಂದೆ ದೂರದೊಳ್ ಕುಳ್ಳಿರ್ದಂ (೧೧-೧೭೬). ಕುಱುಂಬನರಸುಗಂಡಂತೆ ನೋಡುತ್ತುಂ (೧-೨೧೨) ಎಂಬ ವಾಕ್ಯದಿಂದ ಕುರುಬರು ಅರಸರನ್ನು ವಿಸ್ಮಯಭಯಗಳಿಂದ ಕಣ್ಣರಳಿಸಿ ನೋಡುತ್ತಿದ್ದರೆಂದು ಸೂಚಿತವಾಗುತ್ತದೆ. ಪುತ್ರಹೀನರಾದ ಶ್ರೀಮಂತರ ವ್ಯಾಕುಲತೆ 'ಮಗನಿಲ್ಲದರ್ಥಪತಿಯಂತೆ ಬೆದೆಬೆದೆ ಬೇಯುತ್ತುಂ'

---

1. ಹಾರುವ ಗಳಿಸೋದು ಹೊಟ್ಟೆಗೆ, ತುರುಕ ಗಳಿಸೋದು ಬಟ್ಟೆಗೆ, ಒಕ್ಕಲಿಗ ಮಾಡೋದು ದಂಡಕೆ ಎಂಬ ಗಾದೆ ಈಗಲೂ ಹಳ್ಳಿಗಳಲ್ಲಿ ರೂಢಿಯಲ್ಲಿದೆ.

(೧-೧೪೪) ಎಂಬ ವಾಕ್ಯದಲ್ಲಿಯೂ ಕಾಳಸಂತೆಯಲ್ಲಿ ಹಣದೋಚಿಕೊಂಡು ಹೊಸದಾಗಿ ಶ್ರೀಮಂತರಾದವರ ಗರ್ವಾಂಧತೆ 'ನೂತನ ಶ್ರೀಮಂತನಂತೆ ಮೆಯ್ಯಱಿಯದೆ ಬಳ್ಕುತುಂ' (೧-೧೬೦) ಎಂಬ ವಾಕ್ಯದಲ್ಲಿಯೂ ಸುವ್ಯಕ್ತವಾಗಿದೆ. ಸೂಳೆಯರ ಬಾಳಿನ ಒಂದು ಚಿತ್ರ 'ಗರ್ಭಿಣಿಯಾದ ರಂಡೆಯಂತೆ ಬಾಯಂಬಿಟ್ಟು' (೧-೧೬೮), 'ಬಾಣತಿ ಸೂಳೆಯಂತೆ ಸಿಡಿಮಿಡಿಗೊಂಡು' (೧-೧೬೮) ಎಂಬ ವಾಕ್ಯಗಳಲ್ಲಿ ಕಾಣುತ್ತದೆ. 'ಕಂಚಂ ಬಿಟ್ಟೋಡಂ ಪಿಡಿವೆ' (೧೦-೮೩) ಎಂಬ ಹೇಳಿಕೆಯಿಂದ ಓಡು ಬಡತನದ ಕುರುಹಾಗಿತ್ತೆಂದು ತೋರುತ್ತದೆ. ಕನಸುಗಳಲ್ಲಿಯೂ ನಂಬಿಕೆ ಬಲವಾಗಿ ಬೇರೂರಿತ್ತೆಂಬ ಸಂಗತಿ ಹತ್ತನೆಯ ಆಶ್ವಾಸದ ೧೫, ೧೬, ೧೭ ನೆಯ ಪದ್ಯಗಳಿಂದ ಸೂಚಿತವಾಗುತ್ತದೆ. 'ಮಂತ್ರವಾದಿಯಂ ಕಂಡು ಗ್ರಹದಂತೆ ತೆಲ್ಲಿಗರ್ ಪಲ್ಲಣಿಸೆ' (೨-೨೧); 'ಶಕುನವೆಂದು ಸೆಱಗಂ ಗಂಟಿಕ್ಕಿಕೊಂಡು' (೪-೨೦೯) ಎಂಬ ವಾಕ್ಯಾಂಶಗಳಿಂದ ಜನರಲ್ಲಿ ಮಂತ್ರ ತಂತ್ರ ಶಕುನಗಳಲ್ಲಿ ನಂಬಿಕೆಯಿತ್ತೆಂದು ತಿಳಿಯುತ್ತದೆ. ಮನೆಗೆ ನಂಟರು ಬಂದಾಗ ಬಡವರ ಸ್ಥಿತಿ ಹೇಗಿರುತ್ತದೆಂಬುದು 'ಬಂಟರ್ ನಂಟರಂ ಕಂಡ ಬಡವನಂತೊಳಸಾರೆ' ಎಂಬ ಉಪಮೆಯಿಂದ ಗೊತ್ತಾಗುತ್ತದೆ. 'ಸುಂಕಿಗನಂ ಕಂಡ ಭಂಡಮುಳ್ಳನಂತೆ ಸಂಕಿಸುತ್ತುಂ' (೩-೪೬) ಎಂಬ ಮಾತು ಇಂದಿಗೂ ಸತ್ಯವಾಗುಳಿದಿದೆ. ಆಧುನಿಕ ನಾಗರಿಕ ಯುಗದಲ್ಲಿಯೂ ಶ್ರೀಮಂತರು ಸಾಲಕೊಂಡವರನ್ನು ಕಂಬಕ್ಕೆ ಕಟ್ಟಿ ಹೊಡೆದು ಬಡಿದು ಚಿತ್ರಹಿಂಸೆ ಕೊಡುವಾಗ ಹಿಂದೆ ಹೇಗಿತ್ತೆನ್ನುವುದನ್ನು ವಿವರಿಸಬೇಕಾಗಿಲ್ಲ. 'ಸಾಲಂಗೊಟ್ಟವರಂತೆ ಕಾಡಿ ಪೊಡೆಯೆನುತ್ತುಂ' (೨-೭೧); 'ಸಾಲಿಗನಂತೇೞೆನುತ್ತುಂ' 'ಅಮೇಧ್ಯದ ಮೇಲುಗುೞ್ವೊಡೆ ನೋವುದು' (೯-೧೦೮) ಎನ್ನುವಲ್ಲಿ ಆಗಿನ ಜನರ ನಂಬಿಕೆಯನ್ನು ಕವಿ ಗುರುತಿಸಿದ್ದಾನೆ. ಈ ನಂಬಿಕೆ ಈಗಲೂ ಜನಮನದಲ್ಲುಳಿದಿದೆ. 'ಮಕ್ಕಳಂ ಪಡೆವೆನೆಂದು ಮರ್ದಂ ಕುಡಿದ ಮಱುದಿವಸಕ್ಕೆ ಗಂಡಂ ಸತ್ತನೆಂಬಂತೆ' (೨-೯೭) ಎಂಬ ಮಾತಿನಲ್ಲಿ ಮಕ್ಕಳಾಗದವರು ಮದ್ದು ಕುಡಿಯುತ್ತಿದ್ದರೆಂಬುದು ವ್ಯಕ್ತವಾಗುತ್ತದೆ. 'ನಿದ್ರೆ ಪಿರಿದಂತಪ್ಪ ಮರ್ದುಗಳಂ ಕೂೞೊಳ್ ಬೆರಸಿ' (೧೧-೧೨೭) ಎಂಬ ಮಾತು ನಿದ್ದೆ ಬರಿಸುವ ಮೂಲಿಕೆಯನ್ನು ಸೂಚಿಸುತ್ತದೆ. 'ಕಟ್ಟಿದ ಪಲ್ಲಂತೆ'

(೮–೬೪) ಎಂಬ ಮಾತಿನಿಂದ ಹಿಂದಿನಕಾಲದಲ್ಲಿಯೂ ಹಲ್ಲು ಕಟ್ಟುವ ಜಾಣ್ಮೆ ತಿಳಿದಿತ್ತೆಂದು ಭಾವಿಸಬಹುದು. ಅಮಂಗಳವನ್ನು ನೇರವಾಗಿ ವ್ಯಕ್ತಪಡಿಸದೆ ಸದುಕ್ತಿಗಳಿಂದ ಸೂಚಿಸುವ ಜನಪ್ರಿಯ ಪದ್ಧತಿ ಅತಿ ಪ್ರಾಚೀನವಾದುದೆಂದು 'ವಾಂತಿಯ ಪೆಸರ್ ಮೈಲಾರಮೆಂಬಂತೆ, ಪೊಲೆಯರಾಡಿನ ಪೆಸರ್ ಮಾಣಿಕದೇವಿಯೆಂಬಂತೆ, ತೊಟ್ಟಿನ ಪೆಸರ್ ಸಿರಿಯದೇವಿಯೆಂಬಂತೆ, ಎಮ್ಮೆಯ ಪೆಸರ್ ಮಹಾದೇವಿಯೆಂಬಂತೆ, ಓಡಿನ ಪೆಸರ್ ಮಂಗಳ ಮೆಂಬಂತೆ' (೮–೧೭೬) ಎಂಬ ವಾಕ್ಯಮಾಲೆಯಿಂದ ಸ್ಪಷ್ಟವಾಗುತ್ತದೆ.

ಸ್ತ್ರೀಯರ ಸೌಂದರ್ಯ ಮಹಿಮೆಯನ್ನು ಕವಿ ನಾಲ್ಕಾರು ಕಡೆ ಬಣ್ಣಿಸಿದ್ದರೂ, ಅವರ ಬಗೆಗೆ ಅವನ ಮನಸ್ಸಿನಲ್ಲಿ ಸಂದೇಹ ಬೇರೂರಿದ್ದಂತೆ ಕಾಣುತ್ತದೆ. 'ಪೆಣ್ಣೆನಿತೊಳ್ಳಿದಳಾದೊಡೆ ಪುರುಷನೊಳಾದ ಮಹಾಗುಣಂಗಳಂ ಪೋಲ್ತಪಳೇ'[1] (೪–೧೮೬) ಎನ್ನುವ ಮಾತು ಕವಿಯ ಹೃದಯವನ್ನೂ ತೆರೆದು ತೋರಿಸುತ್ತದೆ. ಇನ್ನು ಕೆಲವು ಚಿತ್ರಗಳು: ಶುದ್ಧಮಪ್ಪ ಪೊನ್ನೊಳ್ ದುಷ್ಟರಪ್ಪವರ್ ತಮ್ಮ ಲಾಭದಾಸೆಯಿಂ ಕಿಸು ಬೆಳ್ಳಿಯೆಂಬಿವಂ ಬೆರೆಯಿಸಿ ಪೆಱರ ಕಣ್ಗಟ್ಟಿ ತಿರಿಸಿ ಮೇಲಪ್ಪ ಪೊನ್ನೆಂದು ತೋಱಿಸುವ ತೆಱದಿಂ (೪–೩೪); ಕಿಸುವಂ ಮೂಲಿಕೆಯಂ ಪೊರ್ದಿಸೆ ನಗೆಯೊಳೆ ಹೇಮಮಪ್ಪ ತೆಱದಿಂದ (೪–೩೯) ಅಳಿಯನಂ ಕಂಡತ್ತೆಯಂತೆ ತೊಲಗುತ್ತ (೪–೭೭); ಪೊಲೆಯರ್ಬಡಿವ ಪಱೆಯೋಜೆಗಾಡುವ ಪಗರಣಿಗರಂ ಕಂಡವರ್ನಗುವರಲ್ಲದೆಯವರಾಟಕ್ಕೆ ಲಕ್ಷಣಮಂ ನೋಡರ್ (೫–೧೦೩); ಅಡಗಟ್ಟಿ ಮಡಕೆಯಂ ಪೊಱಗಿಡುವಂತೆ ಕೂಟನಟ್ಟ ಮಡಕೆಯನೇಕೆ ಪೊಱಗಿಡರ್ (೭–೪೩); ಮೂಱುದಿನದ ಪಗರಣಕ್ಕೆ ಗಡ್ಡಮೀಸೆ ಮಂಡೆಯಂ ಬೋಳಿಸಿಕೊಳ್ವಂತೆ (೧೦–೬೭). ಗಡ್ಡ ಗಂಡಸರ ಲಕ್ಷಣವೆಂಬುದಾಗಿ ಆಗಿನ ಕಾಲದಲ್ಲಿ ರೂಢಿಯಲ್ಲಿದ್ದಂತೆ 'ಗಡ್ಡಂಬಾರದಂದವಿಡುವೆನೆಂಬ' (೧೨–೨೪) ಮಾತಿನಿಂದ ವ್ಯಕ್ತವಾಗುತ್ತದೆ. 'ಕುಪ್ಪಕುಱು' (೧೩–೭೭) ಯೆಂಬುದು ಆ ಕಾಲದ ಮಕ್ಕಳಾಟ.[2]

---

1. ಒಮ್ಮೆ ಧರ್ಮಾಮೃತದ ಹಾಳೆಗಳನ್ನು ಮಗುಚಿದರೆ ಇಂಥ ವಾಕ್ಯಗಳೂ ಪದ್ಯಗಳೂ ತಕ್ಕಮಟ್ಟಿಗೆ ಸಿಗುತ್ತವೆ.

2. ಜನಜೀವನವನ್ನು ಕುರಿತು ಪ್ರಬಂಧ ಬರೆಯುವುದಾದರೆ ಧರ್ಮಾಮೃತದಲ್ಲಿಯೇ ಸಾಕಷ್ಟು ಸಾಮಗ್ರಿ ದೊರೆಯುತ್ತದೆ.

೮

**ಧರ್ಮಾಮೃತದಲ್ಲಿ ಪರಮತ ವಿಡಂಬನೆ:** ಧರ್ಮಾಮೃತ ರಚನೆಯ ಕಾಲದಲ್ಲಿ ಕರ್ಣಾಟಕ ಮತೀಯ ಕಲಹದ ಜಂಝಾವಾತಕ್ಕೆ ಸಿಕ್ಕಿ ತತ್ತರಿಸುತ್ತಿತ್ತೆಂಬ ಸಂಗತಿಯನ್ನು ಮೇಲೆ ಸಾಧಾರವಾಗಿ ನಿರೂಪಿಸಿದೆ. ಸ್ವಮತಾಭಿಮಾನ ಅನ್ಯಮತದ್ವೇಷವಾಗಿ ಪರಿಣಮಿಸಿ ಮನೆ ಮನೆಗಳಲ್ಲಿ ಗುಡಿ ಗುಡಾರಗಳಲ್ಲಿ ಹಳ್ಳಿ ಸಂತೆಗಳಲ್ಲೆಲ್ಲ ಆ ಜ್ವಾಲೆ ವ್ಯಾಪಿಸಿಕೊಂಡಿತ್ತು. ಇಂಥ ಸಂದರ್ಭದಲ್ಲಿ ಸಾಹಿತ್ಯ ಪ್ರಚಾರ ಸಾಧನವಾಗುತ್ತದೆ. ಸ್ವಮತ ಸಂಬಂಧವಾದ ದೇವರು ದಿಂಡರುಗಳನ್ನೂ ರೂಢಿ ಪದ್ಧತಿಗಳನ್ನೂ ಉತ್ಪ್ರೇಕ್ಷೆ ಮಾಡಿ ಶ್ಲಾಘಿಸುವುದೂ, ಅನ್ಯದೇವರುಗಳನ್ನೂ ಅನ್ಯಮತದ ಆಚಾರ ವಿಚಾರಗಳನ್ನು ಹಳಿಯುವುದೂ ಯುಗಧರ್ಮವಾಗಿ ಪರಿಣಮಿಸುತ್ತದೆ. ವಿಡಂಬನೆ, ಕಟಕಿ, ಕುಚೋದ್ಯ, ನಿಂದೆ ಮೊದಲಾದ ತಂತ್ರಗಳನ್ನೆಲ್ಲ ಸೂರೆಗೆಯ್ದು ಸಾಹಿತ್ಯದ ಮೂಲಕ ಕವಿಗಳು ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳುವುದುಂಟು. ನಯಸೇನನ ವಿಡಂಬನೆಯಲ್ಲಿ ಕಹಿಯಿದೆ, ಒಗರಿದೆ, ಆಗ್ರಹವಿದೆ, ಮಾತ್ಸರ್ಯವಿದೆ; ಅನ್ಯಮತಗಳನ್ನು ಅಣಕಿಸಬೇಕೆಂಬ ಮನಸ್ಸಿದೆ; ಆದರೆ ಮುನಿಸಹಜವಾದ ಸಂಯಮವೂ ಇದೆ; ಸಭ್ಯವ್ಯಕ್ತಿಯ ನಯವಿನಯಗಳೂ ಇವೆ. ಅವನ ಕಿರಿಯ ಸಮಕಾಲೀನನಾದ ಬ್ರಹ್ಮಶಿವನ ಉಗ್ರತ್ವದೆದುರಿನಲ್ಲಿ ಅವನು ಸೂರ್ಯನ ಬಳಿಯ ಚಂದ್ರನಂತಾಗುತ್ತಾನೆ. ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಮತವನ್ನು ಹಳಿಯುವ ಮನೋಭಾವನೆ ವ್ಯಕ್ತವಾಗಿಯೊ ಅವ್ಯಕ್ತವಾಗಿಯೊ ನಡುನಡುವೆ ಸುಳುಹುದೋರುತ್ತದೆ. ಬ್ರಾಹ್ಮಣ ಮತದ ನಿಕೃಷ್ಟತೆಯನ್ನು ಜೈನಮತದ ಉತ್ಕೃಷ್ಟತೆಯನ್ನೂ ಯುಕ್ತಿಯಿಂದ ಸಾಧಿಸುವ ಪ್ರಯತ್ನ ವಸುಭೂತಿಯ ಕಥೆಯಲ್ಲಿ ನಡೆದಿದೆ. ವರುಣ ಮಹಾರಾಜನಿಗೆ ರೇವತಿ ಮೂಢತ್ರಯಗಳಲ್ಲೊಂದಾದ ದೈವಮೂಢತ್ವವನ್ನು ವಿವರಿಸುವಾಗ, ಅನ್ಯದೇವರನ್ನು ಪೂಜಿಸುವ ಮನುಷ್ಯನನ್ನು ಗಾಂಪನೆಂದು ಕರೆಯುತ್ತಾಳೆ.

ಅನಲನನರ್ಕನಂ ಶಶಿಯನಿಂದ್ರನನಂತಕನಂ ಮರಂಗಳಂ
ವನಧಿಯನುರ್ವಿಯಂ ಮಡಕೆಯಂ ತೊಱೆಯಂ ಕೆಱೆಯಂ ಗೃಹಂಗಳಂ
ಜನನಿಯನಯ್ಯನಂ ಪಶುವನೆತ್ತುಗಳಂ ಕುಲದೈವಮೆಂದು ಮೆ
ಲ್ಲನೆ ಪೊಡೆಮಟ್ಟು ಪೂಜಿಸುವ ಗಾಂಪನೆ ದೈವವಿಮೂಢನುರ್ವಿಯೊಳ್
೫_೨೪೮

ಬಸುರಿಬಯಕೆಯ ತೀರ್ವೆಗಾಗಿ ಸೋಮದತ್ತ ಮಾವಿನಹಣ್ಣು ತರಲು ಹೋಗಿ, ಸುಮತಿ ಭಟ್ಟಾರಕರಿದ್ದ ತೋಪಿನಲ್ಲಿ ಮಾವಿನಮರ ಅಕಾಲದಲ್ಲಿ ಫಲ ಬಿಟ್ಟದುದನ್ನು ನೋಡಿ, ಅದೆಲ್ಲ ಜಿನಧರ್ಮದ ಮಹಿಮೆಯೆಂದು ನಿಶ್ಚಯಿಸಿ, ' ಸ್ವರ್ಗಮೋಕ್ಷಂಗಳುಂ ಕುಡುವ ಗುಣಗಳುಂ ಸದಾಚಾರಮುಂ ಮಹಾವ್ರತಂಗಳುಂ ಜಿನಮತದೊಳ್ ಪುಟ್ಟುಗುಮಲ್ಲದೆ ಪೆಱವು ಕುಮತಂಗಳೊಳ್ ಪುಟ್ಟವು ' ಎಂದು ನಿರ್ಣಯಿಸಿ, ಬ್ರಾಹ್ಮಣ ಮತವನ್ನು ತ್ಯಜಿಸಿ ಜಿನದೀಕ್ಷೆ ಪಡೆಯುತ್ತಾನೆ. ಮತ್ತೊಂದೆಡೆ ' ಹೋಮಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಱಿದೊಡೆ ಸೈರಿಸಲಾಱದೆ ಬೆನ್ನಂ ಪೊಯ್ದು ಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆನ್ಗಳಂ ಪೊಯ್ದುಕೊಂಡರೆಂಬ ಗಾವಿಲಿಕೆಯುಂ ಮಾಡಿ' (೧೧–೫೩) ಎಂದು ಗೇಲಿಮಾಡುವಲ್ಲಿ ಕುಹಕಕ್ಕೆ ಬದಲಾಗಿ ತಿಳಿಹಾಸ್ಯವಿದೆ.

ಜೈನರಂತೆ ಇತರರೂ ಜೈನಮತವನ್ನು ಹಳಿಯುತ್ತಿದ್ದಿರಬೇಕು. ಬ್ರಾಹ್ಮಣ ಮತವೊಂದೇ ಸ್ವರ್ಗಕ್ಕೆ ದಾರಿ ತೋರಿಸುವ ಕೈಮರವೆಂದೂ, ಉಳಿದುವೆಲ್ಲ ನರಕಕ್ಕೊಯ್ಯುವ ಮಾರ್ಗಗಳೆಂದೂ ಕೆಲವರು ಆಡಿಕೊಳ್ಳುತ್ತಿದ್ದಿರಬೇಕು. ನಯಸೇನ ಆ ಆಡಿಕೆಯನ್ನೆತ್ತಿ ಬರೆದಂತೆ ಕಾಣುತ್ತದೆ :

ಬತ್ತಲಿಗರ ಮಾತಂ ಕೇ
ಳ್ದುತ್ತಮನೆನಿಸಿರ್ದ ಕುಲಮನಳಿದೈ ನಿನಗಿ
ನ್ನೆತ್ತಣ ಪರತ್ರೆ ನೀನುಂ
ಸತ್ತೊಡಮಿಾ ಕಷ್ಟವೃತ್ತಿಯುಂ ನೀಗಿದಪಾ ೮–೯೩

ಒಂಬತ್ತನೆಯ ಆಶ್ವಾಸದ ೮೩ನೆಯ ಪದ್ಯದಲ್ಲಿ ಲಿಂಗಧಾರಿಗಳನ್ನುದ್ದೇಶಿಸಿ ಅಣಕಿಸಿದಂತಿದೆ. ' ಜೈನಧರ್ಮಮನಱಿಯದ ಜಡಂ ಮಾಡದ ಪಾಪಮಿಲ್ಲೆಂದು ' (೧೦–೨೨೩) ಹೇಳುವ ಮಾತಿನಲ್ಲಿ ಅನ್ಯಮತಾವಹೇಳನ ರೂಪದ ಪರೋಕ್ಷ ಟೀಕೆ ಕಾಣುತ್ತದೆ.

ಸತ್ಯವ್ರತವನ್ನು ಬೋಧಿಸುವ ಧನದ ಮಹಾರಾಜನ ಕಥೆಯಲ್ಲಿ ಬೌದ್ಧ ಮತದ ನಿಂದೆ ಸ್ಪಷ್ಟವಾಗಿ ಮೈದೋರಿದೆ. ನಯಸೇನನ ಕಾಲದಲ್ಲಿಯೂ ಬೌದ್ಧಮತ ಜೀವಂತವಾಗಿದ್ದಿರಬಹುದೆಂದು ಈ ಕಥೆಯಿಂದ ಊಹಿಸಬಹುದಾಗಿದೆ. ಬೌದ್ಧಮತದಿಂದ ಜೈನಮತಕ್ಕೂ, ಜೈನಮತದಿಂದ ಬೌದ್ಧ

ಮತಕ್ಕೂ ತಾರಾಡುವ ಚಿತ್ರವನ್ನಿಲ್ಲಿ ಕಾಣಬಹುದು. ಪೂತಿವಾಹನ ಮಹಾರಾಜನ ದ್ವಿತೀಯ ಪತ್ನಿ ಬುದ್ಧದಾಸಿಯ ಪ್ರಕರಣ ಮತ್ತೆ ಜೈನ ಬೌದ್ಧಮತಗಳ ಪರಸ್ಪರ ವೈಷಮ್ಯವನ್ನು ಎತ್ತಿ ತೋರಿಸುತ್ತದೆ.

ಇದು ಜೈನಪುರಾಣದ ಪ್ರಕಾರ ದುಷ್ಷಮಕಾಲ. ಈ ಕಾಲದಲ್ಲಿ ಕುಲಿಂಗಿಗಳ ಮತ್ತು ಕುದೈವದ ಕಾಟ ಹೆಚ್ಚುತ್ತದೆಂದು ಕವಿ ವ್ಯಾಕುಲದಿಂದ ಹೇಳಿದ್ದಾನೆ:

ಸಸಿ ಕಿಡುಗುಂ ತೃಣಂ ಬಹುಳಮಕ್ಕುಮಸತ್ಯಮೆ ಪೆರ್ಚುಗುಂ ಶ್ರುತಂ
ಕುಸಿಗುಮನಿಷ್ಟಕಾರಿಗಳೆ ಬಾೞ್ವರುದಾರರೆ ಸಾವರೆತ್ತಲುಂ
ಮಿಸುಕದು ಜೈನಧರ್ಮದ ನೆಗೞ್ತೆ ಕುಲಿಂಗಿಗಳುಂ ಕುದೈವಮುಂ
ವಸುಧೆಯೊಳರ್ವುಗುಂ ನಿಮಿರ್ದು ದುಷ್ಷಮಕಾಲದೇೞ್ಗೆಯೊಳ್
೧೪–೧೫೧

೬

**ಶೈಲಿ :** ಹತ್ತನೆಯ ಶತಮಾನದ ಹಲವು ಮಂದಿ ಕವಿಗಳಿಗೆ ಭಾಸ ಕಾಳಿದಾಸರಿಗಿಂತ ಬಾಣದಂಡಿ ಸುಬಂಧುಗಳು ಆದರ್ಶವಾಗಿದ್ದಂತೆ ಕಾಣುತ್ತದೆ. ಸಂಸ್ಕೃತಭೂಯಿಷ್ಠ ಪಂಡಿತಪ್ರಿಯವಾದ ಮಾರ್ಗಶೈಲಿ ಅವರಿಗೆ ಅಚ್ಚುಮೆಚ್ಚಾಗಿತ್ತು. ಅವರಿಗೆ ಪದ್ಯ ಗದ್ಯಗಳೆರಡೂ ಒಂದೇಯಾಗಿದ್ದುವು. ಗದ್ಯವೂ ವೃತ್ತಗಂಧಿಯಾಗಿ ಮೆರೆಯುತ್ತಿತ್ತು. ಕವಿಗಳ ಕೈಗೆ ಲೇಖನಿ ಬಂತೆಂದರೆ ದೀರ್ಘಸಮಾಸ ಘಟಿತವಾದ ಶ್ಲೇಷಾದ್ಯಲಂಕಾರಗಳಿಂದ ಭಾರವಾದ ಪದ್ಯಗಳೂ, ವಿರಾಮರಹಿತವಾದ ವಿರೋಧಾಭಾಸಾದ್ಯಲಂಕಾರಗಳಿಂದ ಪೆಡಸಾದ ಸುದೀರ್ಘವಾಕ್ಯಗಳುಳ್ಳ ಗದ್ಯ ಭಾಗಗಳೂ ಪುಂಖಾನುಪುಂಖವಾಗಿ ಸ್ವೇಚ್ಛೆಯಾಗಿ ಹರಿಯುತ್ತಿದ್ದುವು. ವಸ್ತುವರ್ಣನೆ ಅಲಂಕಾರ ರೀತಿ ಗುಣ ಎಲ್ಲ ಅಂಶಗಳಲ್ಲಿಯೂ ಹಿಂದಿನ ಕಾವ್ಯಗಳಲ್ಲಿ ಸಂಸ್ಕೃತ ವಾತಾವರಣವೇ ಎದ್ದು ಕಾಣುತ್ತಿತ್ತು. ಕಾವ್ಯ ಜಗತ್ತಿಗೂ ಜನಜೀವನಕ್ಕೂ ಆಪ್ತಸಂಬಂಧವಿದ್ದಂತೆ ಕಾಣುವುದಿಲ್ಲ. ಹನ್ನೊಂದನೆಯ ಶತಮಾನದ ತುದಿಯಲ್ಲಿ ಪ್ರಾರಂಭವಾದ ಮತೀಯ ಚಳುವಳಿಯ ಪರಿಣಾಮವಾಗಿ, ಜನಮನವನ್ನೊಲಿಸಿಕೊಳ್ಳಬೇಕೆಂಬ ಮತ ಪ್ರಚಾರಕರ ಸ್ಪರ್ಧೆಯಿಂದ ಕನ್ನಡ ಕಾವ್ಯಗಳಲ್ಲಿ ಜಾನಪದ ಶೈಲಿ ಇಣುಕತೊಡಗಿತು. ದೇವರದಾಸಿಮಯ್ಯ ನಯಸೇನರು

ಪ್ರಾರಂಭವಾಗಲಿದ್ದ ಹೊಸಶಕೆಯ ಮುಂಗೋಳಿಗಳೆಂದು ಧಾರಾಳವಾಗಿ ಹೇಳಬಹುದು.

ಕಾವ್ಯರಚನೆಯಲ್ಲಿ ನಯಸೇನನಿಗೆ ಸ್ಫೂರ್ತಿನೀಡಿ, ಆದರ್ಶಸ್ಥಾನದಲ್ಲಿ ನಿಂತವರ ಪೈಕಿ ಜಿನಸೇನ ಗುಣಭದ್ರ ಸೋಮದೇವ ಮೊದಲಾದ ಸಂಸ್ಕೃತ ಕವಿಗಳೂ, ಅಸಗ, ಪೊನ್ನ, ಪಂಪ, ಗಜಾಂಕುಶ, ಗುಣವರ್ಮ, ರನ್ನನಂಥ ಕನ್ನಡ ಕವಿಗಳೂ ಮುಖ್ಯರಾದವರು. ಜಿನಸೇನ ಗುಣಭದ್ರರ ಮಹಾಪುರಾಣ ಅವನಿಗೆ ಪೂಜನೀಯವಾದ ಗ್ರಂಥ; ಸೋಮದೇವನ ಯಶಸ್ತಿಲಕ ಚಂಪೂ ಅವನ ಕಾವ್ಯರಚನೆಗೆ ನೇರವಾಗಿ ಗುರುಸ್ಥಾನದಲ್ಲಿ ನಿಂತ ಕಾವ್ಯ. ವಸ್ತು ಕಥಾ ಸಂವಿಧಾನಗಳಲ್ಲಿ ನಯಸೇನ ಸೋಮದೇವನಿಗೆ ಖುಣಿಯೇ ಹೊರತು ರೀತಿಯಲ್ಲಲ್ಲ. 'ದೇಸಿ' ಯಲ್ಲಿ ಅಸಗನೂ, 'ಬೆಡಂಗಿ' ನಲ್ಲಿ ಪೊನ್ನನೂ, 'ಅಪೂರ್ವರಸ' ದಲ್ಲಿ ಪಂಪನೂ, 'ಸದರ್ಥದೃಷ್ಟಿ' ಯಲ್ಲಿ ಗಜಾಂಕುಶನೂ 'ಜಾಣಿ' ನಲ್ಲಿ ಗುಣವರ್ಮನೂ, 'ಓಜೆ' ಯಲ್ಲಿ ರನ್ನನೂ ತನಗೆ ಮಾದರಿಯಾಗಲೆಂದು ಕವಿ ಹಾರೈಸಿದ್ದಾನೆ.[1] ಈ ಕಾವ್ಯಲಕ್ಷಣಗಳಲ್ಲಿ ಕೆಲವಾದರೂ ಇವನ ಕಾವ್ಯದಲ್ಲಿ ಮೈದೋರಿವೆಯೆಂದು ಹೇಳಬಹುದು.

ರಸಭಾವಂ ಗಮಕಂ ಕಾ
ಣಿಸೆ ನಾಣ್ನುಡಿ ದೇಸಿವೆತ್ತ ಪೊಸನುಡಿ ಮಾರ್ಗಂ
ಕುಸುಱಿಯ ಬಗೆಯಿಂದಿನಿತಱಿೊ
ಳೆಸೆಯದ ಕೃತಿ ಕೃತಿಯೆ ಬಗೆದು ನೋೞ್ಪೊಡೆ ಜಗದೊಳ್ ೧–೪೯

ಉತ್ತಮ ಕಾವ್ಯದಲ್ಲಿ ರಸಭಾವಗಳು ಸುಪ್ರಕಟವಾಗಿ ಕಾಣಿಸಬೇಕು. ಅವು ನಾಣ್ನುಡಿ ದೇಸಿವೆತ್ತ ಪೊಸನುಡಿಗಳ ಮೂಲಕ ಅಭಿವ್ಯಕ್ತಗೊಳ್ಳಬೇಕು. ಈ 'ನಾಣ್ನುಡಿ' ಮತ್ತು 'ದೇಸಿವೆತ್ತ ಪೊಸನುಡಿ' ನಯಸೇನನ ಶೈಲಿಯ ಹೃದಯವೆಂಬುದರಲ್ಲಿ ಲವಲೇಶವೂ ಸಂದೇಹವಿಲ್ಲ. ಸಹಜತೆ ಅವನ ಶೈಲಿಯ ಪ್ರಧಾನ ಗುಣ. ಹಿಂದಿನ ಕಾವ್ಯಗಳಲ್ಲಿ 'ದೇಸಿ' ನಾಚಿಕೆ ಸಂಕೋಚಗಳಿಂದಲೆಂಬಂತೆ ಇಣುಕುತ್ತದೆ; ನಯಸೇನನಲ್ಲಿ ಅದೇ ಸರ್ವಾಧಿಕಾರದಿಂದ ಮೆರೆಯುತ್ತದೆ. ಸಾಮಾಜಿಕ ಜೀವನ ನಿರೂಪಣೆಯಿಂದ ಜನ

---

1. ಧರ್ಮಾಮೃತ ೧–೪೯.

ಸಾಮಾನ್ಯದಲ್ಲಿ ಬಳಕೆಯಾಗಿರುವ ಜಾಣ್ನುಡಿ ನುಡಿಗಟ್ಟುಗಳ ಬಳಕೆಯಿಂದ ಕವಿ ದೇಸಿಯ ಬೆಡಗನ್ನೂ, ಸಹಜತೆಯನ್ನೂ ಯಶಸ್ವಿಯಾಗಿ ಸಾರ್ಥಕವಾಗಿ ಸಾಧಿಸಿದ್ದಾನೆ. ಕೇವಲ ಶಾಸ್ತ್ರಬಲದಿಂದ ಕಾವ್ಯಕ್ಕೆ ಸಹಜತೆ ಸಮನಿಸ ದೆಂದು ಅವನು ಸ್ಪಷ್ಟವಾಗಿ ನುಡಿದಿದ್ದಾನೆ. ಪ್ರತಿಭೆಯಿಂದ ಮೂಡದ, ಲೋಕಾನುಭವದಿಂದ ಪುಷ್ಟಿಗೊಳ್ಳದ ಕಾವ್ಯಗಳಲ್ಲಿ ಸೃಜತೆ ಮೈದೋರು ವುದಿಲ್ಲ. ಆದ್ದರಿಂದಲೇ ಅವನು

ಮುಱೆಯಿಲ್ಲದೆ ಪೊಯ್ದಾರಿಂ
ಬೆಳೆಗುಮೆ ಧರೆ ಮುೞುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇೞ್ದೊಡಮುದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ೧_೪೯

ಎಂದು ಘೋಷಿಸಿದ್ದಾನೆ.

'ಶುದ್ಧಗನ್ನಡ' ಪ್ರಯೋಗ ಅವನ ದೇಶಿಶೈಲಿಯ ಮತ್ತೊಂದು ವೈಶಿಷ್ಟ್ಯ. ವ್ಯಾಕರಣ ದೃಷ್ಟಿಯಿಂದ ಮಾತ್ರವಲ್ಲ, ಶೈಲಿಯ ದೃಷ್ಟಿ ಯಿಂದಲೂ ಅವನು ಬಳಸಿರುವ ಭಾಷೆ 'ಪೊಸಗನ್ನಡ.' ಶುದ್ಧಗನ್ನಡ ಸಂಸ್ಕೃತ ಗಳ ಬೆರಕೆಯಿಂದ ಶೈಲಿಯ ಮಾರ್ದವತೆಗೆ ಭಂಗ ಬರುತ್ತದೆಂದು ಎಚ್ಚರಿಸಿ ದ್ದಾನೆ.

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮುಂ ಚಿಂ
ತಿಸಿ ಕೂಡಲಾರದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ೧_೪೧

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ದಗನ್ನಡದೊಳ್ತಂ
ದಿಕ್ಕುವುದೇ ಸಕ್ಕದಮಂ
ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ ೧_೪೩

ನಯಸೇನನಿಗೆ ಕನ್ನಡದ ಬಗ್ಗೆ ಅಪಾರ ಅಭಿಮಾನವಿದೆ; ಆದರೆ ಸಂಸ್ಕೃತದ ಬಗ್ಗೆ ದ್ವೇಷವಿಲ್ಲ. ದ್ವೇಷವಿದ್ದರೆ ಕೆಳಗಿನ ಪದ್ಯವನ್ನು ಬರೆಯುತ್ತಿರಲಿಲ್ಲ:

ಸಕಲ ಗುಣೋಪೇತಂ ಭಾ
ವಕ ತಿಲಕಂ ಜಿನಮತಾಬ್ಧಿ ಚಂದ್ರಂ ಧಾತ್ರೀ

ಶ ಕದಂಬ ನಮ್ರ ಚರಣಂ
ಪ್ರಕಟಿಯಿಶಂ ಭೂರಿ ಭೂತಳಪ್ರಸ್ತುತ್ಯಂ ೭-೧೦

ಈ ಪದ್ಯದಲ್ಲಿ ಕನ್ನಡಪದ ಔಷಧಿಗಾದರೂ ಒಂದು ಸಿಗುವಂತಿಲ್ಲ. ಭಾಷೆಯ ಸಮತೆ ಸರಳತೆಗಳ ಕಡೆಗೆ ಯಾವಾಗಲೂ ಅವನ ಒಲವು. ಕರ್ಣ ಕಠೋರ ವಾದ ಏರುತಗ್ಗಿನ ಕರ್ಕಶ ಶೈಲಿ ಅವನಿಗೊಗ್ಗುವುದಿಲ್ಲ. ಹರಗಿರಿಜೆಯರ ದಾಂಪತ್ಯ ಸಂಬಂಧದಂತೆ ಕನ್ನಡ ಸಂಸ್ಕೃತ ಪದಗಳ ಸಂಬಂಧ ಕೂಡಿ ಬರ ಬೇಕೆಂಬುದು ಅವನ ಮನೋಭಿಲಾಷೆ. ಕನ್ನಡದ ಜಾಯಮಾನಕ್ಕೊಳವಡು ವಂಥ ಸಂಸ್ಕೃತದ ಬಿಡಿನುಡಿಗಳಲ್ಲಿ ಅವನಿಗೆ ಮಮತೆಯಿದೆ ; ಲಾಲಿತ್ಯಕ್ಕೆ ಭಂಗ ಬರದಂತೆ ಭಾವಾಭಿವ್ಯಕ್ತಿಗೆ ಲೋಪವೊದಗದಂತೆ, ಅವೆರಡೂ ಕೂಡಿ ಬಂದರೆ ಅವನಿಗೆ ಪರಮಸಂತೋಷ.

ಕಲಿತನದಿಂದಂ ಲೋಗರ್
ಪುಲಿಯಂ ಪಿಡಿದೊಡಮದೇಂ ಬಿಡೆಂಬರ್ ತಾನೊಂ
ದಿಲಿಯಂ ಪಿಡಿದೊಡಮದು ಪೆ
ರ್ಬುಲಿಯೆಂಬರ್ ದುರ್ಜನರ್ಗೆ ತಾನಿದು ಸಹಜಂ ೧-೧೭೩

ಶ್ರವಣಸುಭಗತ್ವಕ್ಕೆ ಭಂಗ ಬರದಿದ್ದರೆ 'ಪೆಜಿತಿಮುಖಿ' ಯಂಥ ಅರಿಸಮಾಸ ಗಳನ್ನು ಪ್ರಯೋಗಿಸಲೂ ಅವನು ಸಿದ್ಧ.

ಉಪಮೆಗಳ ಅಭಾವದಿಂದ ಕಾವ್ಯಕ್ಕೆ ಕೊರತೆಯಾಗದಿರಬಹುದು ; ಆದರೆ ಅವುಗಳ ಅತಿರೇಕದಿಂದ ಕಾವ್ಯ ದೋಷಯುಕ್ತವಾಗಬಹುದು. ಯಾವುದೋ ಒಂದು ಭಾವವಾಗಲೀ, ಅರ್ಥವಾಗಲೀ ವಾಚಕನ ಮನಸ್ಸಿನಲ್ಲಿ ಆಳವಾಗಿ ನಾಟಲೆಂದು ಕವಿ ಸರಪಳಿಯಂತೆ ಉಪಮೆಗಳನ್ನು ಹೆಣೆಯುವುದು ತಪ್ಪಲ್ಲ; ಕೇವಲ ಚಾಪಲ್ಯಕ್ಕೆನ್ನುವಂತೆ ಗುಪ್ಪೆಗುಪ್ಪೆಯಾಗಿ ಅಡಕಿದರೆ ಉಪಮೇಯೋಪಮಾನಗಳ ಸಂಬಂಧ ದೂರ ಸರಿದು ಉದ್ದೇಶಭಂಗವಾಗು ತ್ತದೆ. ಉಪಮೆಗಳನ್ನು ಮಾಲೆಮಾಲೆಯಾಗಿ ಪೋಣಿಸಬೇಕಾದ ಪ್ರಸಂಗ ವೊದಗಿದಾಗ ಭಾಷೆ ಅನಿವಾರ್ಯವಾಗಿ ಗದ್ಯಕ್ಕೆ ತಿರುಗುತ್ತದೆ. ಆದರೆ ಅವು ಹವಣು ಮೀರಿ ಬೆಳೆದಾಗ ಗದ್ಯವೂ ಉಸಿರುಕಟ್ಟಿ ಏದುವಂತಾಗುತ್ತದೆ ; ಕಾರ್ಯಕಾರಣಸಂಬಂಧದ ಕೊಂಡಿ ಕಳಚಿದಂತಾಗುತ್ತದೆ :

'ಮತ್ತಂ ಕುದುರೆಯೇರ್ದ ಕುಟುಂಬನಂತೆ ನಡುಗುತ್ತುಂ, ಪೆಣನಂ

ಕಂಡ ಪಂದೆಯಂತೆ ಕಣ್ಣಂ ಮುಚ್ಚುತುಂ, ಬಿನ್ನಪಂಗೆಯ್ವವೊಕ್ಕಲಿಗನಂತೆ ಬಿಕ್ಕುತ್ತುಂ, ಸಾಕ್ಷಿಯಿಲ್ಲದೆ ಸಾಲಂಗೊಟ್ಟೊಕ್ಕಲಿಗನಂತೆ ಸುಯ್ಯುತ್ತುಂ, ಸಿಕ್ಕಿದ ಕಳ್ಳನಂತೆ ಪಲವಂ ನೆನೆಯುತ್ತುಂ, ಗ್ರಹಪೀಡಿತನಂತೆ ತೊನೆಯುತ್ತಂ, ಪೇನುಳ್ಳನಂತೆ ತಲೆಯುಂ ತುಱಿಸುತ್ತುಂ, ಕಱು ಸತ್ತಾವಿನಂತೆ ಮಱುಗುತ್ತಂ ತಾಯ್ ಸತ್ತ ಶಿಶುವಿನಂತೆ ಬಾಯ್ವಿಡುತ್ತುಂ, ಕೆಸಱೊಳ್ ಬಿಟ್ಟನಂತೆ ಮಿಡುಕುತ್ತುಂ, ಮಗನಿಲ್ಲದರ್ಥಪತಿಯಂತೆ ಬೆದೆಬೆದೆ ಬೇಯುತ್ತುಂ, ಸೂಲ ವೇಱಿದನಂತೆ ಕಾಲಂ ನೀಡುತ್ತುಂ, ಕೂಟ್ಟಿಡೆಯದನಂತೆ ಬಂಬಲ್ಬಾಡುತ್ತುಂ, ಮುಳ್ವೊಕ್ಕವನಂತೆ ಕುಸಿಯುತ್ತುಂ, ಸೂಲೆಯುಳ್ಳವನಂತೆ ಕವಿದು ಬೀೞುತ್ತುಂ, ಮೋನಂಗೊಂಡ ಚಪಳನಂತುಮ್ಮಳಿಸುತ್ತುಂ, ಚಿತ್ತದೊಳುಳ್ಳುಳ್ಳುತ್ತುಂ, ನಿಲಲ್ಬಾರದೆನಿಸುವ ನೋವಿಂಗೆ ಬೆಬ್ಬಳವೋಗಿ, ಬಾಳಮೋಹಕ್ಕೆ ಶಿಶುವಂ ಪಿಡಿದರೆಂಬ ನಾಣ್ಣುಡಿಯಂತೆ ಪೊನ್ನ ಮೋಹಕ್ಕೆ ಮನಮಂ ಬಿಲ್ವಿಡಿದು ' (೧-೧೪೪)

ಒಮ್ಮೊಮ್ಮೆ ಇಂಥ ಮಾಲೋಪಮೆಗಳಿಂದ ಕ್ರಮಭಂಗ ಭಾವ ಸಾಂಕರ್ಯ ಅರ್ಥಸಂಕ್ಷೋಭೆಗಳೂ ಫಲಿಸುವ ಸಂಭವವುಂಟು. ಇವು ಫಲಿಸಿದಾಗ ಗದ್ಯದೋಷಯುಕ್ತವಾಗುತ್ತದೆ.

ಇಷ್ಟಾದರೂ ಕನ್ನಡ ಗದ್ಯಸಾಹಿತ್ಯದ ಇತಿಹಾಸದಲ್ಲಿ ನಯಸೇನನಿಗೆ ವಿಶಿಷ್ಟವಾದ ಸ್ಥಾನವಿದೆ. ಅಂಬುನುಡಿ, ಬಿಚ್ಚುನುಡಿ, ಬಿಡಿನುಡಿಗಳಿಂದ ಕೂಡಿದ ಸಹಜಸರಳವಾದ, ಲಾಲಿತ್ಯಪ್ರಧಾನವಾದ, ಏರುತಗ್ಗುಗಳಿಲ್ಲದೆ ಅಡ್ಡಿ ಅಡಚಣೆಗಳಿಲ್ಲದೆ ಸರಾಗವಾಗಿ ಹರಿಯುವುದೇ ನಯಸೇನನ ಗದ್ಯದ ವಿಶಿಷ್ಟಲಕ್ಷಣ. ಆ ಗದ್ಯದಲ್ಲಿ ಹರಕು ಬಿರುಕುಗಳಿಲ್ಲ, ತೇಪೆ ಸಿವುರುಗಳಿಲ್ಲ; ವಿಲಾಸವಿದೆ, ವೈವಿಧ್ಯವಿಲ್ಲ ; ಜಾಣ್ಮೆ ಬೆಡಗುಗಳಿವೆ, ಔನ್ನತ್ಯವಿಲ್ಲ ; ಸರಳತೆಯಿದೆ ಶೈಥಿಲ್ಯವಿಲ್ಲ ; ಆಡುಮಾತಿನ ಲಯವಿದೆ, ಗ್ರಾಮ್ಯವಿಲ್ಲ; ಮೊನಚಿದೆ ತೀಕ್ಷ್ಣತೆಯಿಲ್ಲ. ಸಂಪ್ರದಾಯ ಬದ್ಧವಾದ ಚಂಪೂಶೈಲಿಯ ಧೃತರಾಷ್ಟ್ರ ಮುಷ್ಟಿಯಿಂದ ಬಿಡಿಸಿಕೊಂಡು ಜಾನಪದ ಭಾಷೆಯ ಸಂಪರ್ಕ ಸಂಸ್ಪರ್ಶಗಳಿಂದ ಜನ್ಮಾಂತರಹೊಂದಿ, ದೇಸಿಯ ಸೊಗಡನ್ನು ದೆಸೆದೆಸೆಗೆ ಚೆಲ್ಲುತ್ತ, ಬಹುಶಃ ವಚನ ಸಾಹಿತ್ಯೋದಯದ ಮುಂಬೆಳಗೆಂಬಂತೆ ನಯಸೇನನ ಗದ್ಯ ವಿಕಾಸಗೊಂಡಿದೆ. ಬಾಯಿ ಚಪ್ಪರಿಸಿ ರುಚಿ ನೋಡುವ ಸಲುವಾಗಿ ಗದ್ಯದ

ತುಂಡೊಂದನ್ನಿಲ್ಲಿ ಉದ್ಧರಿಸಿದೆ: 'ಕೆಲದೊಳಿರ್ದ ಸಹಸ್ರಕೂಟಮಂಡಿತ ಮೆಂಬ ಜಿನಾಲಯಮನೋಡಿ ಪೋಗಿ ಪೊಕ್ಕಾನೆಯ ಭಯಂ ಪಿಂಗುವಿನ ಮಿರ್ದು ಪೋಗಲೆಂದಿರ್ಪುದುಂ, ಮಱಿ ಪಿರಿದಾಗಿ ಬರೆ, ಮಱಿಯುಂ ಪೋದ ಬೞಿಕ್ಕಂ ಪೋಪೆವೆಂದಿರ್ಪುದುಂ, ನೇಸಱ್ ಪಡುವುದುಂ, ಪುರದ ಬಾಗಿಲ ಪಡಿ ಕೀಱುವುದುಂ, ಪೋಗಲ್ಕೂಡದೆ, ಬಸದಿಯೊಳ್ ಧನ್ವಂತರಿ ವಿಶ್ವಾನು ಲೋಮನ ಮುನ್ನಿನ ಸೂರುಳಂ ನೆನೆದು ಕಿವಿಯೊಳ್ ತೂಂತನಿಟ್ಟು ಪಟ್ಟಿರ್ದನನ್ನೆಗಂ' (೨-೧೭೨)

ಹಿಂದಕ್ಕೊಮ್ಮೆ ನೆನಹುಗಣ್ಣು ಹೊರಳಿಸಿ ಗತವೈಭವವನ್ನು ಸ್ಮರಿಸುತ್ತ ಮತ್ತೊಮ್ಮೆ ಕಲ್ಪನಾಕ್ಷಿಗಳಿಂದ ಅನಂತ ಭವಿಷ್ಯವನ್ನು ಬಾಚಿ ತಬ್ಬಿಕೊಳ್ಳು ವಂತೆ ನಯಸೇನ ಹಳಗನ್ನಡ ನಡುಗನ್ನಡಗಳು ಕೂಡುವೆಡೆಯಲ್ಲಿ ನಿಂತಿದ್ದಾನೆ, ರೂಪಾಂತರ ಹೊಂದುತ್ತಿದ್ದ ಭಾಷಾರೂಢಿಗಳನ್ನು ನಿರ್ಭಯವಾಗಿ ಕಾವ್ಯದ ಪಟ್ಟವಣೆಗೆ ಏರಿಸಿದ್ದಾನೆ. ಕಿಚ್ಚು, ಉಕ್ಕು, ತಕ್ಕೈಸು, ಮಗ್ಗು, ಹಿತ್ತಲ್, ಎದ್ದು, ಬಿದ್ದು, ಎರ್ದು, ಕರ್ಚು, ಎಚ್ಚತ್ತು, ಕದ್ದು, ಹಿಂದೆ, ಅರ್ತಿ, ಹೊಸೆಹ, ಹಕ್ಕಲ್, ಕರ್ಬುನ, ಬಿದ್ದಪರೇ, ಹುಡಹುಡನೆ, ಹೆಪ್ಪು ಮೊದಲಾದ ನಡುಗನ್ನಡದ ರೂಪಗಳು ವಿಪುಲ ಸಂಖ್ಯೆಯಲ್ಲಿ ಮೆರವಣಿಗೆ ಹೊರಟಿವೆ. ಮಱು ಬಳಂಬೆ ಮೊದಲಾದ ಹೊಸಮಾತುಗಳನ್ನೂ ಕವಿ ಚಲಾವಣೆಗೆ ತರುತ್ತಾನೆ. ಕೇಳ್ಬಿ, ನೆಗಱ್ಬಿ, (ಕೇಳ್, ನೆಗಱ್ ಎಂಬ ಧಾತುಗಳ ನಾಮರೂಪಗಳು) ಮುಂತಾದ ನೂತನ ಪದಗಳನ್ನೂ ಶಿಲ್ಪಿಸು ತ್ತಾನೆ. ಏಱಲು ಮಿೞಿಯಲುಂ, ಪೋದಿಂಬೞಿಯಂ, ಪೋಗಿಂಗೆ, ಎಲೆ ಮಿಡುಕದೆ, ಸೀರನಿತುಂ, ನಾರಂತೆ ಹೊಸೆಹಕ್ಕೆವಂದು ಮೊದಲಾದ ಪ್ರಯೋಗ ಗಳು ನವೀನವಾಗಿದ್ದು, ಅವನ ಭಾಷಾಪ್ರಭುತ್ವಕ್ಕೆ ಸಾಕ್ಷಿಯಾಗಿವೆ. ಕೆಲವು ವೇಳೆ ಆಡುಮಾತಿನ ಶೈಲಿಯನ್ನನುಕರಿಸಿ 'ವಿಧಾತ್ರನುಂ ಗಿಧಾತ್ರನುಂ, ಕರ್ಮಮುಂ ಗಿರ್ಮಮುಂ, ಬಿದಿಯುಂ ಗಿದಿಯುಂ' (೭-೧೦೫), 'ಖೇಚರಿಯೆ ಯಲ್ಲ ನಾಂ ಗೀಚರಿಯೆ' (೩-೪೯), 'ಅಜ್ಜಂ ಪಜ್ಜಂ' (೩-೫೭) ಎಂಬ ನುಡಿಗಟ್ಟುಗಳನ್ನು ಲೀಲಾಜಾಲವಾಗಿ ಬಳಸುತ್ತಾನೆ. ಸಮಯಬಿದ್ದಾಗ ಮನೆಗೋಗಿ (೧೩-೧೫೯) ಎಂಬ ಅಶುದ್ಧ ಪ್ರಯೋಗಗಳ ಮೂಲಕ ವ್ಯಾಕರಣದ ಕಟ್ಟುನಿಟ್ಟುಗಳನ್ನು ಮುರಿಯಲು ಅವನು ಹಿಂಜರಿಯುವುದಿಲ್ಲ.

ಒಮ್ಮೊಮ್ಮೆ ಕಾಣಿಸಿಕೊಳ್ಳುವ ‘ಗಾಳಿಯಂ ಗಂಟಿಕ್ಕುವಂತೆ’ ಎಂಬ ಪದ ಸಮುಚ್ಚಯಗಳಲ್ಲಿ ಅವನ ಮಾತಿನ ಮೋಡಿ ಪ್ರಕಟವಾಗುತ್ತದೆ. ನಡುಗನ್ನಡದ ರೂಪಗಳು ಪದ್ಯದ ಕೋಟೆಯನ್ನೂ ಭೇದಿಸಿವೆಯೆಂಬುದನ್ನು ಮರೆಯಬಾರದು. ಸಷ (೧-೧೫೫), ಳಟ (೧-೧೭೧), ಟ್ಟಷ್ಟ (೨-೯೫) ಪ್ರಾಸಗಳಿಗೆ ಬರವಿಲ್ಲ. ಳ-ಟಗಳ ಉಚ್ಚಾರಣಾ ವ್ಯತ್ಯಾಸ ಆ ಕಾಲಕ್ಕಾಗಲೇ ಮರೆಯಾಗುತ್ತಿತ್ತೆಂಬ ಸಂಗತಿ ಮೇಲಣ ಉದಾಹರಣೆಗಳಿಂದ ಸುಸ್ಪಷ್ಟವಾಗುತ್ತದೆ. ಒಮ್ಮೊಮ್ಮೆ ಅವನ ಭಾಷೆಯಲ್ಲಿ ಒರಟುತನವೂ ಅಶ್ಲೀಲವೂ ಮುಖದೋರುವುದುಂಟು. ಅದು ಕಾಠಿನ್ಯದ ಕುರುಹಲ್ಲ, ನಿಷ್ಕಾಪಟ್ಯದ ನಿದರ್ಶನ. ಅಂತು ನಯಸೇನನ ಶೈಲಿಯಲ್ಲಿ ನೆಲದ ವಾಸನೆ, ಕನ್ನಡದ ಕಂಪು ಮಗಮಗಿಸುತ್ತದೆಯೆಂದರೆ ಅತಿಶಯೋಕ್ತಿಯಾಗಲಾರದು.

**ಕವಿಯ ಪ್ರಭಾವಮುದ್ರೆ :** ‘ಧರ್ಮಾಮೃತ ಬಾಹ್ಯರೂಪದಲ್ಲಿ ಚಂಪೂಕಾವ್ಯ, ಅಂತಸ್ಸತ್ತ್ವದಲ್ಲಿ ಜಾನಪದ ಕಾವ್ಯ.’[1] ಅದು ಕಥೆಗಳ ಸಂಕಲನ ಗ್ರಂಥವೇ ಹೊರತು ಮಹಾಕಾವ್ಯವಲ್ಲ. ಮಹಾಕಾವ್ಯದ ಗುಣ ಆಂಶಿಕವಾಗಿ ನಡುನಡುವೆ ತಲೆದೋರುತ್ತದೆ. ಮಹಾಕಾವ್ಯವಲ್ಲದ್ದರಿಂದ ನಯಸೇನನ ಘನತೆಗೆ ಕುಂದು ತಟ್ಟುವುದಿಲ್ಲ. ಸವೆದ ಜಾಡನ್ನು ತೊರೆದು, ಹೊಸ ನೆಲವನ್ನು ತುಳಿದು, ನೂತನ ಮಾರ್ಗವನ್ನು ರಚಿಸಿ ಧೈರ್ಯ ಸಾಹಸಗಳನ್ನು ಮೆರೆಸುವ ವ್ಯಕ್ತಿ ಕವಿಯಾಗಲಿ, ವಿಜ್ಞಾನಿಯಾಗಲಿ, ಪರ್ವತಾರೋಹಿಯಾಗಲಿ ಮಾನವಕೋಟಿಯ ಗೌರವಕ್ಕೆ ಭಾಜನನಾಗುತ್ತಾನೆ. ನಯಸೇನ ಪಂಪರನ್ನರ ಮಾನಸಪುತ್ರನಾದರೂ, ಅವರ ಪ್ರಭಾವವಲಯ ಕೇಂದ್ರದಿಂದ ತುಸುದೂರ ಸಿಡಿದು, ನೇಮಿ ರೇಖೆಯ ಬಳಿ ನಿಂತು ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಂಡ ಸಾಹಸಿ; ಚಂಪೂ ಸಂಪ್ರದಾಯದ ಪ್ರಲೋಭಕರವಾದ ಗಾಢಾಲಿಂಗನದಲ್ಲಿ ಸೆರೆಯಾಗಿದ್ದಾಗಲೇ ಅದನ್ನು ಪರಿಷ್ಕರಿಸಿ, ಸ್ವಲ್ಪಮಟ್ಟಿಗಾದರೂ ಅದರ ಚಹರೆಯನ್ನು ಬದಲಾಯಿಸಿದ ದಿಟ್ಟ ಕವಿ; ಕಥಾಶರೀರ ಹಳೆಯದಾದರೂ, ಅದಕ್ಕೆ ಜಾನಪದ ಶಕ್ತಿವಾಹಿನಿಯನ್ನು

1. ನಯಸೇನ ಕನ್ನಡದ ಒಬ್ಬ ಜಾನಪದ–ಚಂಪೂಕವಿ : ಲೇ. ಡಾ|| ಎಂ. ಚಿದಾನಂದಮೂರ್ತಿ (ಪ್ರಬುದ್ಧ ಕರ್ಣಾಟಕ 45--3)

ಹರಿಸಿ, ಕಾಯಕಲ್ಪ ಚಿಕಿತ್ಸೆ ನಡೆಸಿದ ಜೈನಯತಿ. ಕಾವ್ಯಧರ್ಮವನ್ನು ಸಂಪೂರ್ಣವಾಗಿ ನಿರ್ಲಕ್ಷಿಸದೆ, ಪ್ರಚಾರಕ ಮನೋಧರ್ಮಕ್ಕೆ ಸ್ವಲ್ಪವೂ ಭಂಗ ಬರದಂತೆ, ಸಾಮಾಜಿಕ ಪ್ರಜ್ಞೆ ಹೊಳಲುಗೊಡುವಂತೆ, ಎಲ್ಲೆಲ್ಲು ಕನ್ನಡತನವುಕ್ಕುವಂತೆ ಕಾವ್ಯರಚನೆ ಮಾಡಿ ಸಾಹಿತ್ಯ ಕ್ಷೇತ್ರದಲ್ಲಿ ಶಾಶ್ವತ ಸ್ಥಾನವನ್ನು ಗಳಿಸಿಕೊಂಡ ಗಣ್ಯ ಸಾಧಕ. ಅವನ ಪ್ರತಿಭೆ ಸಹಸ್ರಮುಖಿಯಲ್ಲ, ನಿಜ; ಆದರೆ ಅವನ ಲೋಕಾನುಭವ ಸಂಪತ್ತೂ ಸೂಕ್ಷ್ಮಗ್ರಹಣ ಸಾಮರ್ಥ್ಯವೂ ಯಾರನ್ನಾದರೂ ದಂಗು ಬಡಿಸುವಂಥವು.

ಅನೇಕ ಕನ್ನಡ ಕವಿಗಳ ಪ್ರತಿಭಾಚಕ್ಷುಸ್ಸನ್ನು ಮತದ ಪೊರೆ ಮುಚ್ಚಿಬಿಟ್ಟಿದೆ. ಮತ ಬೆನ್ನು ಹತ್ತಿದ ಭೇತಾಳವಾಗಿ ಅವರ ಬಾಯಿ ಮುಚ್ಚುತ್ತಿದೆ. ಮತೀಯ ಪ್ರಕ್ರಿಯೆಗಳ ಸಂಕೋಲೆಯಿಂದ ಕವಿತಾವನಿತೆಯ ಕೈಕಾಲುಗಳನ್ನು ಬಂಧಿಸಿದೆ. ಭರತಖಂಡದಲ್ಲಿ ಮತ ಪ್ರವೇಶಿಸದ ಜೀವನ ವ್ಯಾಪಾರವಿಲ್ಲ. ಆದರೆ ಅಲ್ಲೊಬ್ಬ ಇಲ್ಲೊಬ್ಬ ಅಸಾಧಾರಣ ವ್ಯಕ್ತಿ ಮತ ಸಂಬಂಧವಾದ ನಿರ್ಬಂಧಗಳಿಂದ ವಿಮುಕ್ತನಾಗಿಯೋ, ಅಥವಾ ತನ್ನ ಮತದಲ್ಲಿ ವಿಶ್ವತತ್ತ್ವಗಳ ಪ್ರತಿಚ್ಛಾಯೆಯನ್ನು ಕಂಡು ಕೊಂಡೋ ಮಹಾಕವಿ ಪಟ್ಟವನ್ನು ಸಾಧಿಸಿದ್ದಾನೆ. ಮತಸಂಬಂಧವಾದ ನಿರ್ಬಂಧಗಳಿಂದ ಪಾರಾಗಿ ತೂಕವಾದ ವಸ್ತುವೊಂದನ್ನು ಆರಿಸಿಕೊಂಡಿದ್ದರೆ ನಯಸೇನ ನಿಜಕ್ಕೂ ಮಹಾಕವಿಯಾಗುತ್ತಿದ್ದನೆಂದು ಅವನ ಕಾವ್ಯಾಧಾರದಿಂದ ಊಹಿಸಬಹುದಾಗಿದೆ.

'ಜಿನಮತದೊಳೆನಿತು ಸಾರಮದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳ್' ಎಂಬ ಗುರಿಯನ್ನು ಮುಂದಿಟ್ಟುಕೊಂಡು ಕಾವ್ಯರಚನೆಗೆ ಕೈಹಾಕಿದವನು ನಯಸೇನ. ಹದಿನಾಲ್ಕು ಕಥೆಗಳಲ್ಲಿ ಸಮ್ಯಗ್‌ದರ್ಶನವನ್ನು ಅದರ ಎಂಟು ಅಂಗಗಳನ್ನು ಪಂಚಾಣುವ್ರತಗಳನ್ನೂ ವಿವರಿಸುತ್ತಾನೆ. ತಾನು ತೊಟ್ಟ ಗುರಿಯನ್ನು ಕವಿ ಯಶಸ್ವಿಯಾಗಿ ಸಾಧಿಸಿದ್ದಾನೆ. ವರ್ಣನೆಗಳ ವಿಷಯದಲ್ಲಿ ಕವಿಗೆ ಅಪಾರ ಸಂಯಮವಿದೆ. ಕಥೆಯ ಚೌಕಟ್ಟಿಗೆ ತಡೆಯುವುದಿಲ್ಲವೆಂದೋ ಏನೋ ಕವಿ ಋತುವರ್ಣನೆ ವೇಶ್ಯಾವಾಟಿಕೆಯ ವರ್ಣನೆಗಳನ್ನು ಅತ್ಯಂತ ಸಂಕ್ಷೇಪವಾಗಿ ಮುಗಿಸಿ ಬಿಡುತ್ತಾನೆ. ಅಷ್ಟಾದಶ ವರ್ಣನೆಯ ಚಾಪಲ್ಯಕ್ಕೆ ಅವನು ಮನಸೋತಿಲ್ಲ. ಮೂರ್ನಾಲ್ಕು ಕಡೆ

ನರಕದ ವರ್ಣನೆ ಸ್ವಲ್ಪ ವಿಸ್ತಾರವಾಗಿಯೇ ಬರುತ್ತದೆ. ಆದರೆ ತಾನು ಹಿಡಿದ ಗುರಿ ಮಾತ್ರ ಅವನ ದೃಷ್ಟಿಯಿಂದ ಮರೆಯಾಗಲಿಲ್ಲ.

ಅನೇಕ ಪೂರ್ವ ಕವಿಗಳಿಗೆ ನಯಸೇನ ಋಣಿಯಾಗಿದ್ದಾನೆಂದು ಮೇಲೆ ಹೇಳಿತು. ಅವರಲ್ಲಿ ಪಂಪ ಕವಿ ಮುಖ್ಯನಾದವನು. ಧರ್ಮಾಮೃತ ದಲ್ಲಿ ಹಲವಡೆ ಭಾವಸಾಮ್ಯವುಳ್ಳ ವಾಕ್ಯಗಳು ಬರುತ್ತವೆ. ನಿದರ್ಶನಾರ್ಥ ವಾಗಿ ಕೆಲವನ್ನಿಲ್ಲಿ ಉದಾಹರಿಸಬಹುದು : 'ಕಡುಗಾಯ್ದುಂ ನೀರ್ ಮನೆಯಂ ಸುಡಲಱಿಗುಮೆ' (೨-೧೦೧) ; 'ಪಂದೆಯನೆ ಪಾವಡರ್ದಂತಿರೆ' (೨-೩೬) ; 'ಬೆಕ್ಕು ಪಾಲನಲ್ಲದೆ ಮೇಲಣ ಬಡಿಯಂ ಕಾಣದೆಂಬಂತೆ' (೬-೧೨೮) ; 'ನಮ್ಮ ಸೆಟ್ಟಿಯ ಮಾತೊಳ್ಳಿದುವು ಬಳ್ಳಂ ಕಿಱಿದೆಂಬಂತೆ ಮಾಡದೆ' (೬--೨೨೧) ; 'ಮಱುಗುವುದೇಕೆ ಚಿಂತಿಸುವುದೇಕೆ ಪಲುಂಬು ವುದೇಕೆ ಸೇದೆಗೆಟ್ಟಱಿಯದೆ ಬೇವುದೇಕೆ....'(೧೪--೨೯) ; 'ಸಿರಿಯೊಳ್ ನಾರಾಯಣಂ ರಂಭೆಯೊಳಮರವರಾಧೀಶ್ವರಂ ಸೀತೆಯೊಳ್ ಭೂಧರ ವಂದ್ಯಂ ರಾಘವೇಶಂ........' (೧೧--೨೨). ಅವನ ನಂತರ ಬಂದ ಹಲವು ಕವಿಗಳ ಮೇಲೆ ನಯಸೇನನ ಪ್ರಭಾವಮುದ್ರೆ ಅಂಕಿತವಾಗಿರು ಬೇಕೆಂದು ಆಕಸ್ಮಿಕವೆನ್ನಲಾಗದ ಕೆಲವು ಸಾಮ್ಯಗಳಿಂದ ಗೊತ್ತಾಗುತ್ತದೆ : 'ಪೆಂಡಿರಂ ಮಾಱಿ ತೊೞ್ತಿರಂ ಕೊಳ್ವ' (೧೪--೧೦೬) ಎಂಬ ಸೂಕ್ತಿ ಯನ್ನು ಹರಿಶ್ಚಂದ್ರ ಕಾವ್ಯದ 'ಹೆತ್ತತಾಯಂ ಮಾಱಿ ತೊತ್ತ ಕೊಂಬರೆ' ಎಂಬುದರೊಡನೆ ಹೋಲಿಸಬಹುದು. 'ಬೇವಿನ ಬೀಜವ ಬಿತ್ತಿ ಬೆಲ್ಲದ ಕಟ್ಟೆಯ ಕಟ್ಟಿ ಆಕಳ ಹಾಲನೆಱೆದು ಜೇನು ತುಪ್ಪ ಹೊಯ್ದರೆ ಸಿಹಿಯಾಗ ಬಲ್ಲುದೆ ಕಹಿಯಾಗಲೊಲ್ಲುದೆ' ಎಂಬ ಬಸವಣ್ಣನವರ ವಚನವನ್ನೋದಿ ದಾಗ 'ಬೇವಿನ ಗಿಡುವಂ ತಂದೀಟ್ಟಾವಿನ ನೊಱೆವಾಲನೆಱೆದು ನಡಪಿದೊಡಂ ಕೇಳ್ | ಬೇವಿಂಗೆ ಕೈಪೆ ಪಿಂಗದು | ಭೂವಳಯದೊಳೆಂಬ ತೆಱದಿನಂ ಪುರದವರುಂ' (೪-೧೫೬) ಎಂಬ ಧರ್ಮಾಮೃತದ ಪದ್ಯವನ್ನು ನೆನಪಿಗೆ ತರುತ್ತದೆ. 'ಧರಣೀ ಚಕ್ರಮುಮಂ ವಿಯತ್ತಳಮುಮಂ ಗಂಟಿಕ್ಕುವ ರ್ವಿರ್ಮಂಚಿನ | ಚ್ಚರಿಯಪ್ಪಂತಿರದೊಂದು ಮಾಡಿ ಸಮೆವರ್ ಕಲ್ಲಲ್ಲಿ ನಾರೆತ್ತು ವರ್' (೩-೧೩೪) ಎಂದು ಜೋಡೆಯರ ಮಹಿಮೆಯನ್ನು ವರ್ಣಿಸುವ ನಯಸೇನನ ಪದ್ಯಕ್ಕೂ 'ಮರನೀಗುಂ ಮಣಿಯಿಾಗುವೊಂದು ಪಶುವೀಗುಂ

....ಕಲ್ಲಲ್ಲಿ ನಾರೆತ್ತುವರ್' (೧--೧೩) ಎಂದು ಕವಿಗಳ ಸತ್ವಾತಿಶಯವನ್ನು ವರ್ಣಿಸುವ ನೇಮಿಚಂದ್ರನ ಪದ್ಯಕ್ಕೂ ನಿಕಟವಾದ ಹೋಲಿಕೆಯಿದೆ. 'ನರರಂ ಋಷಕೇತು ಕೊಂದು ಕೂಗದೆ ಮಾಣಂ' (೧೦-೩೩) ಎಂಬ ನಯಸೇನನ ವಾಕ್ಯಕ್ಕೂ 'ಮನಸಿಜನ ಮಾಯೆ ವಿಧಿವಿಳಸನದ ನೆರಂಬಡೆಯೆ ಕೊಂದುಕೂಗದೆ ನರರಂ' (೨--೬೧) ಎಂಬ ಜನ್ನನ ಯಶೋಧರ ಚರಿತ್ರೆಯ ವಾಕ್ಯಕ್ಕೂ' ಸ್ಪಷ್ಟವಾದ ಸಾಮ್ಯವಿದೆ. ಮುಂದಿನ ಪೀಳಿಗೆಯ ಮೇಲೆ ಅಚ್ಚಳಿಯದಂತೆ ರೂಹುದೋರುವುದರಿಂದ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ಅವನ ಸ್ಥಾನಮಾನಗಳ ಬಗ್ಗೆ ಸ್ವಲ್ಪವೂ ಸಂದೇಹವಿಲ್ಲವೆಂದು ಹೇಳಬಹುದು.

* * * *

ಈ ಸಂಗ್ರಹದ ಎರಡನೆಯ ಮುದ್ರಣ ಶೀಘ್ರವಾಗಿ ಹೊರಗೆ ಬರಲು ಕೆಲವು ಮಿತ್ರರು, ಮುಖ್ಯವಾಗಿ ಶ್ರೀಮಾನ್ ಪರಮೇಶ್ವರ ಭಟ್ಟರು, ಶ್ರೀ ನಾರಾಯಣ ಶೆಟ್ಟರು, ಶ್ರೀ ರಾಮೇಗೌಡರು, ಮತ್ತು ಶ್ರೀ ಹರಿಶಂಕರ್ ಅವರು ನಾನಾ ವಿಧವಾಗಿ ಸಹಾಯ ಮಾಡಿದ್ದಾರೆ. ಶ್ರೀಮಾನ್ ರಾ. ವೆಂ. ಶ್ರೀನಿವಾಸಮೂರ್ತಿಯವರು ಅಂದವಾಗಿ ಮುದ್ರಿಸಿ ಕೊಟ್ಟಿದ್ದಾರೆ. ಅವರಿಗೆ ನನ್ನ ಅನಂತ ಧನ್ಯವಾದಗಳು.

ಗುರುಕೃಪಾ, ಮೈಸೂರು

**ದೇ. ಜ. ಗೌ**

# ಪರಿವಿಡಿ

V.K. Rame Gowda

## ೧. ಪ್ರಸ್ತಾವನೆ

ಶ್ರೀರಾಮಾರಮಣೀಯ ಪಾದಸರಸೀಜಾತಂ ನಿಲಿಂಪೇಂದ್ರವೃಂ
ದಾರಾಧ್ಯಂ ಭುವನತ್ರಯಪ್ರಭು ವಿನೇಯಾನೀಕಕಲ್ಪದ್ರುಮಂ
ಧೀರಂ ನಿತ್ಯನನಂತನಕ್ಷಯಸುಖಂ ಮುಕ್ತ್ಯಂಗನೇಶಂ ಜಗ
ತ್ಸಾರಂ ವೀರಜಿನೇಂದ್ರನೀಗೆಮಗೆ ಮುಕ್ತಿಶ್ರೀಸುಖಾವಾಪ್ತಿಯಂ ೧

ಅಸಗನ ದೇಸಿ ಪೊನ್ನನ ಮಹೋನ್ನತಿವೆತ್ತ ಬೆಡಂಗು ಪಂಪನೊಂ
ದಸದೃಶಮಪ್ಪಪೂರ್ವರಸಮೆಯ್ದೆ ಗಜಾಂಕುಶನೊಳ್ಪುವೆತ್ತು ರಂ
ಜಿಸುವ ಸದರ್ಥದೃಷ್ಟಿ ಗುಣವರ್ಮನ ಜಾಣ್ಕೆಕವಿರತ್ನನೋಜೆ ಶೋ
ಭಿಸೆ ನೆಲಸಿರ್ಕೆ ಧಾರಿಣಿ ಮನಂಗೊಳೆ ಮತ್ಕೃತಿಯೊಳ್ನಿರಂತರಂ ೨

ಪೊಸಗನ್ನಡದಿಂ ವ್ಯಾವ
ರ್ಣಿಸುವೆಂ ಸತ್ಕೃತಿಯನೆಂದು ಕನ್ನಡಮಂ ಚಿಂ
ತಿಸಿ ಕೂಡಲಾರದಕ್ಕಟ
ಮಿಸುಕದ ಸಕ್ಕದಮನಿಕ್ಕುವವನುಂ ಕವಿಯೇ ೩

ಸಕ್ಕದಮಂ ಪೇೞ್ವೊಡೆ ನೆಱೆ
ಸಕ್ಕದಮಂ ಪೇೞ್ಗೆ ಸುದ್ದಗನ್ನಡದೊಳ್ತಂ
ದಿಕ್ಕುವುದೇ ಸಕ್ಕದಮಂ
"ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲಮುಮಂ" ೪

ಮಱೆಯಿಲ್ಲದೆ ಪೊಯ್ನೀರಿಂ
ಬೆಳೆಗುಮೆ ಧರೆ ಮುೞುಗಿ ಕುದಿದು ಶಾಸ್ತ್ರದ ಬಲದಿಂ
ದಳಿಪಿಂ ಪೇೞ್ವೊಡಮದು ಕೋ
ಮಳಮಕ್ಕುಮೆ ಸಹಜಮಿಲ್ಲದಾತನ ಕಬ್ಬಂ ೫

ಶ್ರೀದಯಿತೆಗೆ ನಿರ್ವಾಣ
ಶ್ರೀದಯಿತೆಗೆ ದರ್ಶನಾಂಗಮೆಂಟುಂ ಚಿತ್ತಾ

ಹ್ಲಾದಕರವೆಂದು ನಂಬಿದ
ನಾದರದಿಂ ಸುಕವಿನಿಕರಪಿಕಮಾಕಂದಂ

ಜಿನಮತದೊಳೆನಿತು ಸಾರಮ
ದನಿತುಂ ಲೇಸಾಗಿ ತೋರ್ಪುದೀ ಕೃತಿಯೊಳದೆಂ
ತೆನೆ ಕನ್ನಡಿಯೊಳಗೆ ಜಲ
ಕ್ಕನೆ ತೋರ್ಪವೊಲಿಭದ ರೂಪು ವಿಸ್ತರದಿಂದಂ

ಅತಿಶಯಜಿನೇಂದ್ರವಚನಾ
ಮೃತಮಂ ಸಕಲೈಕಜೀವಹಿತಮಂ ಪುಣ್ಯೋ
ದಿತಮಂ ಭವ್ಯನಿಕಾಯ
ಸ್ತುತಮಂ ನೆಱೆ ಪೇೞ್ವೆನಱಿಯೆ ಧರ್ಮಾಮೃತಮಂ

## ೨. ದರ್ಶನಂ ಸಕಲಧರ್ಮಕ್ಕಂ ಧರಾಚಕ್ರದೊಳ್

ಅದು ಮತ್ತೆಂತೆಂದೊಡಿಂದ್ರಪ್ರಣುತ ಪದಯುಗಂ ಮೋಕ್ಷಲಕ್ಷ್ಮೀ ವಿಳಾಸಂ
ಮದನೇಭೇಂದ್ರೋಗ್ರಕಂಠೀರವನಮಳಯಶಂ ನಿರ್ಮಳಂ ಸರ್ವಸೌಖ್ಯಾ
ಭ್ಯುದಯಂ ಶ್ರೀವೀರನಾಥಂ ನೆಲಸಿರೆ ವಿಪುಳಾದ್ರೀಂದ್ರದೊಳ್ ಶೋಭೆಯಿಂ ಮು
ತ್ತಿದ ದೇವಾನೀಕದಿಂ ಸುತ್ತಿದ ಖಚರನರಾಧೀಶಸಂದೋಹದಿಂದಂ ೧

ಅಂತಾ ಗಿರೀಂದ್ರದೊಳ್ಚರಮತೀರ್ಥಕರ ಪರಮದೇವರ ಸಮವಸರಣಂ ಬಂದು ನೆಲಸಿರ್ದುದನಱಿದು ಋಷಿನಿವೇದಕಂ ಷಡೃತುಫಲಂಗಳನಾಶ್ಚರ್ಯಮಪ್ಪಂತೆ ಶ್ರೇಣಿಕಮಹಾರಾಜಂಗೆ ಕಾಣ್ಕೆಗೊಟ್ಟು ಸರ್ವಾಂಗಪ್ರಣತನಾಗಿ ಕೈಮುಗಿದು ದೇವಾ ನಿಮ್ಮ ವಿಪುಳಗಿರಿಯೊಳ್ ಶ್ರೀವೀರವರ್ಧಮಾನಸ್ವಾಮಿಗಳ ಸಮವಸರಣಂ ಬಂದು ನೆಲಸಿರ್ದುದೆಂದು ಬಿನ್ನಪಂಗೆಯ್ಯಲೊಡನೆ ಕೇಳ್ದು ಸಿಂಹಾಸನದಿಂದಿೞಿದತ್ತಲೇಳಡಿಯಂ ನಡೆದು ವಿನಮಿತಶಿರಸ್ಕನಾಗಿ ಋಷಿನಿವೇದಕಂಗೆ ಪೂರ್ಣಾನಂದಪುರಸ್ಸರಮಂಗಚಿತ್ತಮಂ ಕೊಟ್ಟಾನಂದಭೇರಿಯಂ ಪೊಯ್ಸಿ ಪಡೆವಳನಂ ಬರಿಸಿ ಬೀಡೆಲ್ಲಮರ್ಚನಾದ್ರವ್ಯಂಬೆರಸು ಪೊಱಮಡುವಂತೆ ಸಾರೆಂದು ನಿಯಮಿಸಿ ತಾನುಂ ಚೇಳಿನಿಮಹಾದೇವಿಯುಂ ಪಟ್ಟವರ್ಧನಗಜೇಂದ್ರಮನೇಱಿ ಸಪರಿವಾರಂ ವಿಪುಳಾದ್ರಿಯನೆಯ್ದಿ ದೂರೋತ್ಸಾರಿತವಾಹನಂ ವಿಚಿತ್ರಾತಪತ್ರ ಪ್ರಮುಖರಾಜಚಿಹ್ನಂಗಳಂ ಬಿಟ್ಟು ಸಮವಸರಣಮನೆಯ್ದಿ ಗಂಧಕುಟಿಯಂ ತ್ರಿಃಪ್ರದಕ್ಷಿಣಂಗೆಯ್ದು ಪರಮೇಶ್ವರನ ಪಾದಪದ್ಮಂಗಳಂ ದಿವ್ಯಾರ್ಚನೆಗಳಿಂದರ್ಚಿಸಿ ತ್ರೈಲೋಕ್ಯಸ್ವಾಮಿಗಭಿಮುಖನಾಗಿ ನಿಂದು ಮುಕುಳಿತಕರಕಮಳನುಂ ವಿಕಸಿತಹೃತ್ಕಮಳನುಮಾಗಿ

ದುರಿತತಿಮಿರಪ್ರಭಾವಂ
ಪರಿಹರಿಪುದು ದೇವ ನಿನ್ನ ಮುಖಚಂದ್ರಮನಿಂ
ತ್ವರಿತಂ ನೋಡಲದೆಂತುಂ
ದೊರೆಕೊಳ್ಪುದು ವೀರಜಿನಪ ನಿರ್ವೃತಿಸೌಖ್ಯಂ ೨

ಎಂದನೇಕಸ್ತುತಿಸಹಸ್ರಂಗಳಿಂ ಸ್ತುತಿಯಿಸಿ ನಿರ್ಭರಭಕ್ತಿಯಿಂದೆಱಗಿ

ಪೊಡೆಮಟ್ಟು ಶ್ರೇಣಿಕಮಹಾರಾಜಂ ಜ್ಞಾನಾರ್ಥಿಸಂಪನ್ನರಪ್ಪ ಗೌತಮಸ್ವಾಮಿ
ಗಳ್ಗೆ ಪೊಡೆಮಟ್ಟು

ತಿರಿಕನಾರಕಮಾನವಾಮರಲೋಕದೊಳ್ ನೆಲೆಗೊಂಡು ನಿ
ತ್ತರಿಸದೆಲ್ಲಿಯುಮಲ್ಲಿಗಲ್ಲಿಗೆ ಪುಟ್ಟ ರಾಟಳದಂದದಿಂ
ತಿರಿವ ಸಂಸೃತಿದುಃಖದಿಂ ಪೊಱಮಟ್ಟು ಶಾಶ್ವತಸೌಖ್ಯದೊಳ್
ನೆರೆವುಪಾಯಮನಱ್ತಿಯಿಂ ಬೆಸಸಲ್ಕೆವೇಟ್ಕು ಮುನೀಶ್ವರಾ ೩

ಎನೆ ನಯದಿಂ ಚತುರ್ವಿಧಸುರಾಳಿ ಶಿರೋನತರಾಗಿ ಹಸ್ತಕೋ
ಕನದಯುಗಂಗಳಂ ಮುಗಿಯೆ ದಂತಮರೀಚಿ ಸುಧಾಂಶುರಶ್ಮಿಯುಂ
ತನುಪಮವಾಗಿ ಶೋಭಿಸಿರೆ ಸರ್ವಜನಸ್ತುತರಪ್ಪ ಗೌತಮರ್
ವನಧಿಗಭೀರದಿಂ ನುಡಿದರಾಪ್ತಮುಖೋದ್ಗತಮಪ್ಪ ತತ್ವಮಂ ೪

ನೀಂ ಬೆಸಗೊಂಡ ಚತುರ್ಗತಿಚ್ಛೇದಮುಂ ಜಾತಿಜರಾಮರಣದೂರಮುಂ
ಸಾರಮುಮಪ್ಪ ನಿರಂತರಸುಖಂ ಮುಕ್ತಿಯೊಳಲ್ಲದೆ ದೊರೆಕೊಳದಾ ಮುಕ್ತಿಯುಂ
ತ್ರಿಜಗನ್ಮಾಂಗಲ್ಯಮಪ್ಪ ಸಮ್ಯಗ್ದರ್ಶನದಿಂದಲ್ಲದೆ ಸಮನಿಸದಾ ಸಮ್ಯಗ್ದರ್ಶನಮುಂ
ಕರಣಲಬ್ಧಿಯಿಲ್ಲದೆ ಕೂಡದಾ ಸಮ್ಯಗ್ದರ್ಶನಮಿಲ್ಲದೆ ನಿರಂತರಸ್ಥಾಯಿಯಪ್ಪ
ಮುಕ್ತಿಶ್ರೀಯಂ ಪಡೆವೆನೆಂಬಾತಂ ಮತಿಯಿಲ್ಲದೆ ಪರದುಗೆಯ್ವೆನೆಂಬ, ಕೇರಿಲ್ಲದೆ
ಚಿತ್ರಮಂ ಬರೆವೆನೆಂಬ, ಗೋತ್ರಮಱಿಯದೆ ಕೂಸುಗುಡುವೆನೆಂಬ, ತೂಬಿಲ್ಲದೆ
ಕೆಱೆಯಂ ಕಟ್ಟುವೆನೆಂಬ, ಕೀಲಿಲ್ಲದೆ ಪಡಿದೆಱೆವೆನೆಂಬ, ಕೆಯ್ಯಿಲ್ಲದೆ ಬೇಲಿ
ಯಿಕ್ಕುವೆನೆಂಬ ಪಚ್ಚಪಸಿಯೆಗ್ಗನಂ ಪೋಲ್ಕುಂ

ವರಚಕ್ರವರ್ತಿಪದವಿಗ
ಮುರುಗೀರ್ವಾಣಾಧಿಪತಿಯ ಸದ್ವಿಭವಕ್ಕಂ
ಪರಮಾರ್ಹಂತ್ಯ ಪದಕ್ಕಂ
ಪರಮಾರ್ಥಂ ಶುದ್ಧದರ್ಶನಂ ಮೊತ್ತಮೊದಲ್ ೫

ಕಂಪಿಲ್ಲದ ತುಪ್ಪಮುಂ, ಕೋಡಿಲ್ಲದ ಸಿರಿಯುಂ, ನಾಡಿಲ್ಲದರಸುಂ,
ನಚ್ಚಿಲ್ಲದ ಪೆಂಡತಿಯುಂ, ದಯೆಯಿಲ್ಲದ ನೆಗಱ್ತೆಯುಂ, ಭಂಡಮಿಲ್ಲ
ದಂಗಡಿಯುಂ, ಭಕ್ತಿಯಿಲ್ಲದ ಕೊಂಡಾಟಮುಂ, ಶಕ್ತಿಯಿಲ್ಲದ ಸೆಣಸುಂ

ಕೇರಿಲ್ಲದ ಮನೆಯುಂ, ಘೃತವಿಲ್ಲದೂಟಮುಂ, ಸಮ್ಯಗ್ದರ್ಶನಮಿಲ್ಲದ ದಾನಮುಂ ತಪಮುಂ ಜಪಮುಂ ಧರ್ಮಮುಮೊಪ್ಪಲಾರ್ಕುಮೆ?

ದುರಿತವಶದಿಂದೆ ತಿಱ್ಱನೆ
ತಿರಿಯದೆ ಸುಖನಿಳಯಮಪ್ಪ ಮುಕ್ತಿಶ್ರೀಯೊಳ್
ನೆರೆದಿರ್ಪೆನೆಂಬ ಭವ್ಯಂ
ಪರಮಾದರದಿಂದೆ ತಾಳ್ದುವುದು ದರ್ಶನಮಂ ೬

ಎಸೆವಂಗ*ಮೆಂಟಱಿಂ ರಂ
ಜಿಸುವ ಮಹಾನರ್ಘ್ಯಮಪ್ಪ ದರ್ಶನಮಂ ಶಂ
ಕಿಸದೆ ತಡೆದಿರದೆ ಕೈಕೊಂ
ಡೆಸಗುಗೆ ತಾಂ ಬೞಿಕಮೈದಣುಬ್ರತತತಿಯಂ ೭

ಅವಾವುವೆಂದೊಡೆ

ಕೊಲ್ಲದ ಪುಸಿಯದ ಕಳವಿನಿ
ಸಿಲ್ಲದ ಪರವನಿತೆಯರ್ಗೆ ಪದಪಿಂ ಚಿತ್ತಂ
ಸಲ್ಲದ ಪರಿಗ್ರಹಕ್ಕಳಿ
ಪಿಲ್ಲದ ಸುವ್ರತಮಿವೈದುಮಲ್ಲವೆ ರತ್ನಂ ೮

ಎಂಬುದುಂ ಗಣಧರದೇವರ್ಗೆ ಮಗಧಾವನೀವಲ್ಲಭಂ ಭಕ್ತಿಪೂರ್ವಕಂ ವಂದಿಸಿ ನಿಮ್ಮಡಿಯೆನಗೆ ತಿಳಿವಂತಾಗೆ ದರ್ಶನಮುಂ ನಿಶ್ಶಂಕಾದ್ಯಷ್ಟಗುಣಂಗಳುಂ ಪಂಚಾಣು ವ್ರತಮುಮೆಂಬ ಪದಿನಾಲ್ಕು ಮಹಾರತ್ನಂಗಳೊಳೊಂದೊಂದ ಱೊಳ್ ಚರಿಯಿಸಿ ನಿರ್ವೃತಿಯನೆಯ್ದಿದ ಮಹಾಪುರುಷರ ಕಥೆಗಳಂ ಬೆಸಸಲ್ವೇೞ್ಕುಮೆಂಬುದುಂ ಮೃದುಮಧುರಗಂಭೀರಧ್ವನಿಯಿನಿಂತೆಂದು ಪೇೞಲ್ತಗುಳ್ದರ್

---

*ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿತ್ವ, ಉಪಗೂಹನ, ಸ್ಥಿತಿಕರಣ, ವಾತ್ಸಲ್ಯ, ಧರ್ಮಪ್ರಭಾವನೆ.

ಮುದದಿಂದೊಂದೊಂದಱೊಳ್ತಾಗುವ ಜಲಚರಸಂದೋಹದಳ್ಕೀಱಿಂ ಪೊ
ಣ್ಮಿದ ತಚ್ಛೀತಾಂಬುವಿಂ ತಜ್ಜಲಧಿನೊಗೆದ ಮುಕ್ತಾಳಿಯಿಂದೆಯ್ದೆ ಶುಭ್ರಾಂ
ಬುದಮುಂ ತಾರಾಳಿಯುಂ ಪೋಲ್ತೆಸೆವ ನೆಱೆ ನಭೋಭಾಗದಂತೊಪ್ಪಿ ಸುತ್ತಿ
ರ್ದುದು ಜಂಬೂದ್ವೀಪಮುಂ ವಾರಿಧಿ ಕವಯುರಮುಂ ಬೀಸಿದಂತಾಗೆ ಚೆಲ್ವಿಂ ೯

ಆ ಜಂಬೂದ್ವೀಪದ ನಟ್ಟನಡುವೆ

ಮುದದಿಂ ಜಿನಾಭಿಷೇಕ
ಕ್ಕಿದು ಮಜ್ಜನಪೀಠಮೆನಿಸಿ ಮಹಿಮೆಯಿನೊಪ್ಪಿ
ರ್ದುದು ಪೆಂಪಿಂ ತ್ರೈಲೋಕ್ಯಾ
ಭ್ಯುದಯಂ ರಮಣೀಯಮಪ್ಪ ಮಂದರಶೈಲಂ ೧೦

ಆ ಮೇರುಗಿರಿಯ ದಕ್ಷಿಣಭಾಗದ ಭರತಕ್ಷೇತ್ರದೊಳ್ ಸೌರಾಷ್ಟ್ರವಿಷಯ
ಮೆಂಬುದು ನಾಡಲ್ಲಿ

ಜಿನಭವನಾವಳಿಯಿಂದುಪ
ವನದಿಂ ಪೆರ್ಗೆಱೆಗಳಿಂ ಸರೋಜಾಕರದಿಂ
ಧನದನ ಪುರದಂತೊಪ್ಪುವು
ದನವರತಂ ಶೋಭೆಯಿಂ ಕರಂ ಗಿರಿನಗರಂ ೧೧

ಆ ಪುರವನಾಳ್ವಂ ವಿಶ್ವಸೇನನೆಂಬ ಮಹಾಮಂಡಳಿಕನಾತನ ರಾಜ
ಶ್ರೇಷ್ಠಿಯನ್ವಯ ಶುದ್ಧನುಂ ಪ್ರಸಿದ್ಧನುಮಪ್ಪ ದಯಾಮಿತ್ರಸೆಟ್ಟಿಯೆಂಬ ಪರಮ
ನಿರ್ಮನಾತಂ

ಸಿರಿಯೊಳ್ ಕುಬೇರನಂ ತ್ರ
ಸ್ತರಿಯಾಡುವನಹಿಪನೊಡನೆ ಭೋಗಕ್ಕಂ ಮ
ಚ್ಚರಿಸುವನುದಾರಗುಣದೊಳ್
ಪುರುಡಿಸುವಂ ಕಲ್ಪವೃಕ್ಷದೊಳ್ತದ್ವಣಿಜಂ ೧೨

ಅಂತು ನೆಗೞ್ತೆವೆತ್ತು ಸುಖಸಂಕಥಾವಿನೋದದಿಂ ಪಲವುಕಾಲ
ಪೋಪುದುಮೊಂದು ದಿವಸಂ ತನ್ನೊಳಿಂತೆಂದಂ :

ಪುರುಷಂ ಧನಮೆನಗುಂಟೆಂ
ದಿರಲಾಗದು ದ್ರವ್ಯಮುಳ್ಳೊಡಂ ದ್ರವ್ಯಮನಾ
ರ್ಜಿಪುದೇಕೆನೆ ವಿತ್ತಂ ತಾಂ
ದೊರೆಕೊಳೆ ಕೇಳಿಹಪರಂಗಳೆರಡುಂ ಸಾಧ್ಯಂ ೧೩

ಎಂದು ಪರದುವೋಪೆನೆಂಬ ಬಗೆಯಂ ತಂದು ಯಥೋಚಿತಮಪ್ಪ ಭಂಡಮಂ ಕೊಂಡು ಶುಭದಿನದೊಳ್ ಪೊಱವೀಡಂ ಬಿಟ್ಟು ತನ್ನನಾಶ್ರಯಿಸಿ ಬರ್ಪವರ್ ಬರ್ಪನ್ನೆವರಮಿರ್ಪನ್ನೆಗಂ

ಕೊರಲ ಪೊಸಜನ್ನಿವರಮೊ
ಪ್ಪಿರೆ ನಿಡುಬೊಟ್ಟಿಸೆಯೆ ದರ್ಭೆ ಕರಮತಿಶಯದಿಂ
ಬೆರಳೊಳ್ ರಂಜಿಸೆ ಕಾಶಾಂ
ಬರಮೆಸೆದಿರೆ ಬಂದು ನಿಂದು ಭೂಸುರನೊರ್ವಂ ೧೪

ವೇದರುಕ್ಕಂ ಪೇೞ್ದಕ್ಷತೆಯನೀವುದುಂ ದಯಾಮಿತ್ರಸೆಟ್ಟಿ ನೋಡಿ ನಿಮ್ಮ ಪೆಸರೇನೆಂದೆತ್ತಣಿಂ ಬಂದಪ್ಪಿರಿನ್ನೆಲ್ಲಿಗೆ ಪೋದಪ್ಪಿರಿಲ್ಲಿಗೇಂ ಕಾರಣಂ ಬಂದಿರೆಂದು ಬೆಸಗೊಳ್ಳುದುಂ ಪಾರ್ವನಿಂತೆಂದಂ

ವಸುಭೂತಿಯೆಂಬುದೆನ್ನಯ
ಪೆಸರುನ್ನತಿವೆತ್ತ ತೆಂಕನಾಡಿಂ ಬಂದೆಂ
ವಸುಧೆಗೆಸೆದಿರ್ದ ಗಂಗೆಯ
ನಸಹಾಯನೆಯರ್ತಿವೆರಸು ಮಿಾಯಲ್ಕೆಂದಾಂ ೧೫

ಎಂದು ಮುಂದಡವಿಯಪ್ಪುದಱಿಂ ಕ್ರೂರಮೃಗಂಗಳಿಂದಾನುಂ ವನಚರರಿಂದಾನುಂ ಪ್ರಾಣಭಯಮಕ್ಕುಮೆಂದಂಜಿ ನೆರವಂ ಪೊಱಲಿನೊಳಱಸುತ್ತುಮಿರ್ದು ನಿಮ್ಮ ಪೋಗಂ ಪುರಜನಂ ಪೇೞೆ ಕೇಳ್ದು ನಿಮ್ಮ ನೆರವನಾಶ್ರಯಿಸಿ ಬಂದೆನೆಂಬುದುಂ ಸೆಟ್ಟಿ ಕರಮೊಳ್ಳಿತ್ತು ಬನ್ನಿಮೆನೆ ವಸುಭೂತಿ

ಕರಮೊಸೆದು ರಾಗದಿಂ ಪೆ
ರ್ಚಿರೆ ಸೆಟ್ಟಿ ಮನೋನುರಾಗದಿಂದೊಡನೆಯವರ್

ಬರೆ ನಯದಿಂ ಪಿರಿದು ಬಲಿಂ
ಬೆರಸು ಮಹೋತ್ಸಾಹಚಿತ್ತದಿಂ ಮಱುದಿವಸಂ ೧೬

ಮುಮ್ಮತ್ತಿರ್ವರ್ಪೆಂಡಿರುಮಂ ಬಂಧುಜನಮುಮಂ ಜ್ಯೇಷ್ಠಪುತ್ರನುಮಂ ಕರೆದು

ಸಂತತಂ ಮುನಿಸಂಕುಳಕ್ಕೆಱೆದನ್ನಮಂ ಜಿನಪೂಜೆಗೋ
ರಂತೆ ಬೇಟ್ಪ ಸಮಸ್ತವಸ್ತುವ ಸಾರಿಸಾರಿಗೆ ದಾನಮಂ
ಸಂತಸಂ ಮಿಗೆ ನಿಮ್ಮನಾಶ್ರಯಿಸಿರ್ಪ ಭವ್ಯಜನಕ್ಕೆ ನಾ
ನೆಂತು ಮಾಡುವೆನೆನ್ನ ಬರ್ಪಿನಮಂತೆ ಮಾಡಿ ನಿರಂತರಂ ೧೭

ಎಂದು ಕೈಮುಗಿದು ಬೇಡಿಕೊಂಡು ಭರದಿಂದೊಪ್ಪೈಸಿ ಪೊಜಮಟ್ಟು ಪಯಣಂಬೋಗುತ್ತುಂ ತನಗೆ ದಿವಸಕ್ಕೆ ಮೂಱುಗಳಿಗೆವರಂ ಧರ್ಮಶ್ರವಣಮಂ ಕೇಳ್ದಲ್ಲದುಣ್ಣೆನೆಂಬ ವ್ರತಮುಂಟಪ್ಪುದಱಿಂ ಬಿಟ್ಟಬೀಡುಗಳೊಳ್ ಸಕಲ ಶ್ರಾವಕರ್ಗೆ ಧರ್ಮಮಂ ಪೇಟ್ವ ದಯಾಮಿತ್ರಸೆಟ್ಟಿಯ ಧರ್ಮಶ್ರವಣಕ್ಕೆ ವಸುಭೂತಿ ಕಳಕಳಿಸಿ ನಕ್ಕು ತನ್ನೊಳಿಂತೆಂದಂ

ಕುಲಮಂ ಮಾಸಿಸಿ ಮಾಹಮಂ ತೊಱೆದು, ಕಂಡರ್ಪೇಸೆ ಮೆಯ್ಯೊಳ್ ಮಹಾ
ಮಲಮಂ ತಾಳ್ದಿದ ಕಷ್ಟರಂ ಸವಣರಂ ಕಂಗೆಟ್ಟರಂ ಕಂಡು ಸಂ
ಚಲಚಿತ್ತಂ ಕುಲದೈವಮೆಂದು ಪದಪಿಂ ಕೊಂಡಾಡುವಿಂತಪ್ಪ ಗಾ
ವಿಲನಂ ಗಾಂಪನನಗ್ಗನಂ ಜಡನನೆಂ ಕಾಣೆಂ ಮಹೀಚಕ್ರದೊಳ್ ೧೮

ಎಂದು ನಾನಾವಿಧದಿಂ ದೂಷಿಸಿ ಮತ್ತಂ ಸೈರಿಸಲಾಱದೆ ಈತನ ಧನಮುಂ ಬುದ್ಧಿಯುಂ ವೃಥೆಯಾಗದಂತೆನ್ನ ಬಲ್ಲ ಮಾರ್ಗದಿಂ ತಿಳಿಪಿ ಬೞಿಕ್ಕೆ ಧರ್ಮಮಂ ಪತ್ತುವಿಡಿಸಿ ಮದೀಯಧರ್ಮದೊಳ್ ಪತ್ತಿಸುವೆನೆಂಬ ಬಗೆಯಂ ತಂದು ಸೆಟ್ಟಿಗಿಂತೆಂದಂ

ಪರವಸ್ತುವನಱಿವೆಡೆಗಂ
ಪರದರ್ಕಡುಜಾಣರೆಂದು ಕರಮಾದರದಿಂ

ದರ್ಶನಂ ಸಕಲಧರ್ಮಕ್ಕಂ ಧರಾಚಕ್ರದೊಳ್
ನರನಾಥಪೂಜಿಸುವ
ರ್ಧರೆ ಪೊಗೞ್ವುದು ವಸ್ತುಪುರುಷರೆಂದುಱಿ ನಿಮ್ಮಂ ೧೯

ಎಲ್ಲೆಲ್ಲ ವಸ್ತುಗಳುಮಂ
ಬಲ್ಲಿರ್ನಿಮ್ಮನ್ನರಿಲ್ಲ ಬುದ್ಧಿಗೆ ನೀವುಂ
ನಿರ್ಲಜ್ಜರಪ್ಪ ಸವಣರ
ಸೊಲ್ಲಿಂಗೊಳಗಾದುದಕ್ಕೆ ನಾಂ ಬೆಱಗಾದೆಂ ೨೦

ಮಾಯಮನೆ ಬೀಸ್ರಿ ಪೆಱರನು
ಪಾಯದೆ ಠಕ್ಕಿಕ್ಕಿ ದೇವಕಾರ್ಯದೊಳಿನಿಸುಂ
ನೋಯದೆ ಸುಖಿಯಿಪ ಸವಣರು
ಪಾಯಮನಿಂ ನಿನ್ನೊಳಣ್ಣ ಭಾವಿಸಿ ನೋಡಾ ೨೧

ಮಲಮಂ ಧರಿಯಿಸ್ರಿ ನಾಣಂ
ತೊಲಗಿಸಿ ನಿರ್ಗ್ರಂಥಮಿರ್ದು ಸೊಂಬಿಂ ಪಲ್ಲಂ
ಸುಲಿಯದೆ, ಮಿಾಯದೆ, ಮಿಳ್ಕದೆ
ಕುಲದಿಂ ಕೆಟ್ಟವರನಣ್ಣ ನೀಂ ಮನ್ನಿಪುದೇ ೨೨

ಮತ್ತಂ ಭಾವಿಸುವೊಡವರ ಮಾಟಮೆಲ್ಲಂ (ಕೂೞ್ ಕಾರಣಮಲ್ಲದೆ ಗತಿ ಕಾರಣಮಲ್ಲದು, ಗತಿವಡೆವೆನೆಂಬುದು ಕಾಯಕ್ಲೇಶಂ ಬೇೞ್ಪುದು ; ಆ ಕಾಯಕ್ಲೇಶಂ ನಿಮ್ಮ ನಚ್ಚಿನ ಸವಣರ ಮೆಯ್ಯೊಳೆಳ್ಳನಿತುಮಿಲ್ಲ ; ನೀನವರುನುವವರ ದೈವಮುಮಂ ಕೊಂಡಾಡುವ ಮರುಳಾಟಕ್ಕೆನಗೆ ಪಿರಿದುಂ ವಿಸ್ಮಯಮಾದಪು ದೆಂಬುದುಂ ದಯಾಮಿತ್ರಸೆಟ್ಟಿ ಮುಗುಳ್ನಗೆನಕ್ಕು ತನ್ನೊಳಿಂತೆಂದಂ

ಬೇಡಂ ಮಾಣಿಕಮೊಂದಂ
ಕಾಡೊಳ್ ಕಂಡೊರ್ಮೆ ಮೆಲ್ದು ಪಗಿನಲ್ಲೆಂದೀ
ಡಾಡಿದನೆಂಬೀ ನಾಣ್ಣುಡಿ
ನಾಡೆಯುಮೆಸೆದವುದು ದುರಿತವಶದಿಂದಿವನೊಳ್ ೨೩

ಬೆಳಗಿನೊಳಂ ಕಾಣದು, ನಿಶಿ
ಯೊಳ್ ಕಾಣ್ಬುದು ಪೆಗ್ಗಣಕ್ಕೆ, ನಿರ್ಗುಣರ್ಗಂತು
ಜ್ಜ್ವಳ ಧರ್ಮಮನಱಿಯದೆಯು
ಮ್ಮಳಮಂ ಪೊರ್ದುವುದು ಜಡರ್ಗೆ ಸಹಜಮೆನಿಸಿಕ್ಕುಂ ೨೪

ಮದ್ದುಕುಣಿಕೆಯಂ ತಿಂದ್ಗುಂಗೆ ಕಲ್ಲುಂ ಮಣ್ಣುಂ ಮರನುಂ ಪೊಂಬಣ್ಣ ಮಾಗಿ ತೋರ್ಪಂತೆ, ಕರ್ಮದ ತೀವ್ರತೆಯಿಂದೀ ಪಾರ್ವಂಗೆ, ಲೌಕಿಕಧರ್ಮಮೆ ಧರ್ಮಮಾಗಿ ತೋರ್ಪುದದು ಕಾರಣದಿಂ, ಸದ್ಧರ್ಮಮನೊರ್ಮೆಯೆ ಪೇೞ್ದ ನಪ್ಪೊಡೆ, ಪಿತ್ತಜ್ವರಮುಳ್ಳವಂಗೆ ಕುದಿವ ಪಾಲನೆಱೆವಂತಾನುಂ, ಕಪಿಯ ಕೊರಲೊಳ್ ಪೂಮಾಲೆಯಿಕ್ಕಿದಂತಾನುಂ, ಶಿಶುವಿನ ಕೆಯ್ಯೊಳ್ ಮಸೆದ ಬಾಳಂ ಕೊಟ್ಟಂತಾನುಮಕ್ಕುಮದಱಿಂದುಪಾಯದೊಳೆ ತಿಳಿಪಲ್ವೇೞ್ಕು ಮೆಂದು ದಯಾಮಿತ್ರಸೆಟ್ಟಿ ಪತ್ತೆಂಟುದಿವಸಂ ಪೋಗಲ್ ಮತ್ತೊಂದು ದಿವಸಂ

ಬರಿಸಿ ವಸುಭೂತಿಯಂ ವಿ
ಷ್ಟರಮಂ ಕುಡವೇೞ್ದು ಪಿರಿದು ಮನ್ನಣೆಯಿಂದಾ
ದರದಿಂ ವೀಳಯಮಂ ಕ
ರ್ಪುರಸಹಿತಂ ಕೊಟ್ಟು ವೈಶ್ಯಸುತನಿಂತೆಂದಂ ೨೫

ಭಟ್ಟರೆ ಕೇಳಿಂ ನಿಮ್ಮಂ
ಬಿಟ್ಟು ಕೆಲಕರ್ಮಲಜರೊಳರೆ ನಂಬಿದೆನೀಗಳ್
ನೆಟ್ಟನೆ ನಿಮ್ಮಿಂ ಸುಗತಿಯ
ಬಟ್ಟೆಯ ತೆಱನಱಿಯಲಾಯ್ತು ಪುಣ್ಯೋದಯದಿಂ ೨೬

ಎಂಬುದುಂ ವಸುಭೂತಿ ಮಹಾಭೂತಿವೆತ್ತರಂತೆ ಮನದೊಳ್ ಪೆರ್ಚೆ ದಯಾಮಿತ್ರಸೆಟ್ಟಿ ಮೆಲ್ಲನಿಂತೆಂದಂ

ಎಮ್ಮನ್ವಯದಿಂ ಬಂದುದು
ತಾಮ್ಮಿಗಿಲಪ್ಪೊಂದು ನೋಂಪಿಯಾ ನೋಂಪಿಯುಮಂ
ನಾಮ್ಮಱೆದೆಂ ಸಂತತಮೆಂ
ತೆಮ್ಮಯ್ಯಂ ನೋಂಪನಂತು ನೋನುತುಮಿರ್ಪೆಂ ೨೭

ಕೇಡಿಲ್ಲದೊಂದು ಸುಖಮಂ
ಮಾಡುವೊಡರ್ಹತ್ಪದಾಂಬುಜಾತಮೆ ಮಾಳ್ಕುಂ
ಮಾಡವು ಪೆಜವೆಂಬೀ ಬಗೆ
ಕೂಡಿದೊಡಾತಂ ಕೃತಾರ್ಥನಾತನೆ ಧನ್ಯಂ ೨೮

ಅದೆಂತೆಂದೊಡೆ ಮನೋಜಮದಹರನುಂ ಸುರಾಸುರಮಕುಟತಟಘಟಿತ ಚರಣಾರವಿಂದನುಮಪ್ಪರ್ಹತ್ಪರಮೇಶ್ವರನೆಮ್ಮನ್ವಯದಿಂ ಬಂದ ಕುಲದೈವಮು ಮಿಷ್ಟದೈವಮುಮಪ್ಪುದಱಿಂ ಜಿನೇಶ್ವರಸಾಕ್ಷಿಯಾಗಿ ನುಹರ್ಷಿಯರ್ಕಳ್ಗಿಂ ನೋನಿಸಿ ಬೇಳ್ಪುದಂ ಕುಡುವೆನೀಗಳ್. ಆ ನೋಂಪಿಯಂ ನೋಂಪ ಕಾಲ ಮಾಸನ್ನಮಾಯಿತ್ತಾಯವಸರದೊಳ್ ಋಷಿಯರಾರುಮಿಲ್ಲ ಇಲ್ಲದೊಡಮೇ ನಾಯ್ತು

ಪಾಲ್ದೇಮರ್ದೆಂಬಂತಿರೆ
ಭೂಲೋಕಸ್ತುತ್ಯರಪ್ಪ ನಿಮ್ಮನ್ನೊರ್ವರ್
ಸಾಲದೆ ಜಗದೊಳ್ ನೀವಿರೆ
ಮೇಲೆನಿಸುವರಾರೊ ಕುಲದೊಳಂ ಶೀಲದೊಳಂ ೨೯

ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂತಿನ್ಮಡಿಯಕ್ಕುಮದು ಕಾರಣದಿನಿಲ್ಲಿ ನೋಂಪಿಯಂ ನೋಂತು ನೋಂಪಿಯ ತದನಂತರಂ ಬೇಳ್ಪನಿತು ದಕ್ಷಿಣೆಯಂ ಬೇಡಿಕೊಳ್ಳಿಮೆನೆ ಸೆಟ್ಟಿಯ ಮಾತಿಂಗೆ ವಸುಭೂತಿ ಮನದೊಳ್ ಗುಡಿಗಟ್ಟಿ

ಬಿತ್ತರದಿಂ ಕುರುಡಂ ಕ
ಣ್ಬೆತ್ತಂತಿರೆ ರಾಗಮೊದವೆ ಬೆಲೆವೆಣ್ ಪೆಣ್ಣಂ
ಪೆತ್ತಂತಿರೆ ಪಾರ್ವಂ ಮ
ಣ್ಬೆತ್ತಂತಿರೆ ಪಿರಿದು ಸಂತಸಂ ಮಿಗೆ ಮನದೊಳ್ ೩೦

ಮರ್ದನಗಲ್ಲೊಪೇದಂ ನಿಧಿಗಂಡಂತೆ ಪೆರ್ಚಿ ಕರಮಶುಚಿಗಳಪ್ಪ ಸವಣರ್ಗೆ ಕುಡುವಾತನೆಮ್ಮನ್ನರಪ್ಪ ಸದ್ಬ್ರಾಹ್ಮಣರ್ಗೆ ಕುಡುವನೆಂಬುದಾವಚೋದ್ಯಂ

ಒದವಿದ ಪೊನ್ನಪ್ಪೊಡೆ ಜೋ
ಳದ ರಾಸಿಯೊಲಿರ್ಪುದಿಲ್ಲಿ ತಾನೇನಂ ಬೇ
ಡಿದೊಡಂ ಬೇಡಿದುದಂ ಕುಡು
ವುದು ಪುಸಿಯೇ ವೈಶ್ಯನಂದನಂ ಪುಸಿದಪನೇ ೩೧

ನೆರೆಪಲ್ವಾರದ ವಿತ್ತಂ
ದೊರೆಕೊಂಡುದು ನೆಲೆಗೆ ಪೋಗಿ ಮಕ್ಕಳೊಳಂ ಪೆಂ
ಡಿರೊಳವೊಡಗೂಡಿ ಸುಖದಿಂ
ಚರಿಯಿಸುವೆಂ ಮೆಚ್ಚಿದಂದದಿಂ ಭೋಗಿಸುವೆಂ . ೩೨

ಎಂದು ಮನದೊಳೆ ಪಾಲ್ಗುಡಿದು ನೋಂಪಿಯಂ ನೋಂಪ ಕ್ರಮಮಂ ಪೇೞೆಮೆನೆ ವೈಶ್ಯವಂಶಲಲಾಮನಿಂತೆಂದನಾ ನೋಂಪಿ ತೀರ್ವನ್ನಂ ಗ್ರಾಸದೊಳ್ ಕಟಿವೆಯ್ಕೂಟಂ, ತಿಳಿದುಪ್ಪಮಂ ಪೆಱರೊರ್ವರ್ಬಡಿಸೆ ಕಯ್ಯೊಳ್ ಮೋನದಿಂದುಂಡು

ಮಱುದಿನಮಾ ಪೊತ್ತಪ್ಪಿನ
ಮಜ್ಜಿಕೆಯು ನೀರೂಟ ತಂಬುಲಂಗಳ ಮಾತಂ
ತೊಱೆದು, ಮತಿಮಱೆದು ಮನೆಯೊಳ್
ಪೊಱಮಡದೋದುತ್ತುಮಿರ್ಪುದಿರುಳುಂ ಪಗಲುಂ ೩೩

ಸಲೆ ಮಱೆಯೊಳ್ಪಡುವುದು ಮೈ
ಮಲರ್ವೇೞ್ತಿತ್ತೆಂದು ಮಿಾಯಲಾಗದು, ಪಲ್ಲಂ
ಸುಲಿಯದೆ ವನಿತೆಯರಂ ಪಂ
ಬಲಿಸದೆ ತಲ್ಲಣಿಸದಿರ್ಪುದತ್ಯುತ್ಸವದಿಂ ೩೪

ಮತ್ತಂ ನೋಂಪಿಯ ಪ್ರಾರಂಭದೊಳಂ ನೆಱವಿಯೊಳಂ ತಲೆಯ ರೋಮಂಗಳೆಲ್ಲಮಂ ಪಱಿಯಿಸಿ, ರಾಗದಿನೆಮಗೀವುದಿತ್ತು, ಮನದೊಳುಮ್ಮಳಿಸದೊಂದೆಡೆಯೊಳ್ ಮುನ್ನಿನ ವಿನೋದಂಗಳಂ ಮಱೆದಪ್ಪೊಡಂ ನೆನೆಯದೆ ಸ್ವಾಧ್ಯಾಯಪರನಾಗಿ, ಬೀಡಿನೊಳಾದಿನಿತಕ್ಕಂ ವಿಸ್ಮಯಕ್ಕಂ ವಸ್ತ್ರಕ್ಕಮುಪೇಕ್ಷೆಯಿಂದೆಳ್ದಿಂತೆರಡು ತಿಂಗಳ್ವರಂ ಎಮ್ಮ ಪೇೞ್ದ್ಪೋಜೆಯಿಂ ನೋಂಪುದೆಂದು ಪೇೞ್ವುದುಂ

ಬಳಗಱಿಯದನಿತುಮಂ ಸಂ
ಚಲಚಿತ್ತಂ ಮಾಟ್ಪೆನೆಂದು ಪೂಣ್ದಂ ತನ್ನೊಂ
ದಳವಱಿಯದೆ ಕಡುಲೋಭದಿ
ನೆಳಗಱು ಭಯಮಱಿಯದೆಂಬವೊಲ್ತ ದ್ವಿಪ್ರಂ ೩೫

ಆರಯ್ದು ನೋಡಿ ನಗುವವ
ರಾರೆನ್ನಂ ದೂರದೇಶಮಾಂ ನೋಂಪೆನಿದಂ
ಸೈರಣೆಯಿಂ ಚೆಂಬೊಂಗಳ
ನೋರಂತಿರೆ ಬೇಡಿಕೊಳ್ವೆನೆನ್ನಾ ರ್ಪನಿತಂ ೩೬

ಉಸಿರದೆ ಗಳಿಗೆವರಂ ಸೈ
ರಿಸಿ ತಲೆಯಂ ಪಱಿಸಿಕೊಂಡು ಚೆಂಬೊನ್ನಂ ಸಂ
ತಸದಿಂ ಕೈಕೊಳ್ವೆಂ ಭಾ
ವಿಸುವೊಡೆ ತಲೆಯಲ್ಲಿ ಮತ್ತೆ ಪುಲ್ಮೊಳೆದಪುದೇ ೩೭

ಉಂಬುದು ಕಟಿವೆಯ ಕೂಟ್ಗಡ
ತಂಬುಲಮಿರ್ಪೊತ್ತಿನುಣಿಸು ಮಿಾಹಂ ಕೇಳಿ
ಲ್ಲೆಂಬಿನಿತೆ ಗಡಂ ತಿಂಗಳು
ಮೆಂಬುದು ತಾಂ ದೂರಮಾಯ್ತೆ ಪೇೞ್ವೆಂ ಗಹನಂ ೩೮

ಎಂದು ತನ್ನೊಳ್ ರಾಗಿಸುತ್ತಿರೆ ವಣಿಗ್ವಂಶಲಲಾಮನುಂ ಬೀಡಿನುಪ್ಪಯಣಂ ಮಾಡಿ ಮಱುದಿವಸಂ ಸಮಸ್ತದುರಿತವಿಳಯನಪ್ಪ ಜಿನಸ್ವಾಮಿಗೆ ತೂರ್ಯರವ ಮೆಸೆಯೆ ಮಹಾಭಿಷೇಕಪೂಜೆಯಂ ಮಾಡಿಸಿ ವಸುಭೂತಿಯಂ ಬಡಗಮುಖ ನಾಗಿ ಕುಳ್ಳಿರಿಸಿ

ತಲೆಯಂ ಬಲುದಡಿಗರ್ಕಿೞ್ತೆ
ನಿಲಲಾಱದೆ ಸುಂಟಿದಿಂದ ಕೋಡಗದಂತು
ಮ್ಮಳಿಸಿ ಕಳವಳಿಸಿ ನೋವಿಂ
ತಲೆಯಂ ತಿರಿಪುತ್ತುಮಂಜಿ ಕೆಟ್ಟೆನೆನುತ್ತುಂ ೩೯

ನಡುಗೆ ಶರೀರಂ ಪಲ್ಲಂ
ಗಿಡಿಗಿಱಿದೆರ್ದೆಗೂಡುವಾಯೆ ಪಂದೆಯ ಮೇಲ್ಪಾ
ವಡರ್ದಂತಿರೆ ದೇಹಂ ಮುರ
ವಡೆ ಕಣ್ಣೀರ್ಸುರಿಯೆ ತಳದಿನದನೊತ್ತುತ್ತುಂ ೪೦

ಬಿಡದಾಡುಗರ್ಚೆ ನೋವಿಂ
ದಡಿಗಡಿಗಹಹಾಯೆನುತ್ತು ಮೆಡಗಯ್ಯಿಂದಂ
ತಡವರಿಸುತ್ತುಂ ಸಾಸವೆ
ಗುಡಿದಂತಿರೆ ಕರಮೆ ಮಱುಗಿ ತಳವೆಳಗಾದಂ ೪೧

ಮತ್ತಂ ಸಾಕ್ಷಿಯಿಲ್ಲದೆ ಸಾಲಂಗೊಟ್ಟೊಕ್ಕಲಿಗನಂತೆ ಸುಯ್ಯುತ್ತುಂ, ಪೇನುಳ್ಳನಂತೆ ತಲೆಯಂ ತುಱಿಸುತ್ತುಂ, ಮುಳ್ಪೊಕ್ಕವನಂತೆ ಕುಸಿಯುತ್ತುಂ, ಸೂಲೆಯುಳ್ಳವನಂತೆ ಕವಿದು ಬೀೞುತ್ತುಂ, ನಿಶ್ರೇಯಸಶ್ರೀಯ ವಿವಾಹ ಗೇಹದ ಭೂಮಿ ಶೋಧನೆಯೆನಿಪ ಲೋಚನೆಂತಾನುಂ ಸೈರಿಸ

ವಿನಯ ಪಯೋನಿಧಿ ಸತ್ಯದ
ಮನೆಯೆನಿಸಿದ ಸೆಟ್ಟಿ ಪೇೞ್ದ ಮಾರ್ಗದೊಳಂತಂ
ದಿನದಿನಮುಪವಾಸಮನಿ
ರ್ದನುನಯದಿಂದೇಕಚಿತ್ತದಿಂ ಮಱುದಿವಸಂ ೪೨

ಅಯಾಚಿತವ್ರತಮಪ್ಪುದಱಿಂ ಸೆಟ್ಟಿ ನಿಱಿಸೆ ಮನೆಗೆಪೋಗಿ ವೈಶ್ಯೋತ್ತಮಂ ಪೇೞ್ದೋಜೆಯಿಂ ನಿಂದಿರ್ದು ಪಾಣಿಪಾತ್ರೆಯೊಳ್ ಶರ್ಕರೆವೆರಸಿದ ಪಾಲಂ ಕುಡಿದು ತದನಂತರಂ

ಸೊಗಯಿಪ ಘೃತಪೂರಂ ಹೋ
ಳಿಗೆ ಮಂಡಗೆ ತಱಗು ನಾಡೆ ರುಚಿವೆರಸಿದ ಲ
ಡ್ಡುಗೆ ಚಕ್ಕುಲಿ ಗಾರಿಗೆ ಪೂ
ರಿಗೆ ಮೊದಲಾಗಿರ್ದ ಪಲವು ಭಕ್ಷ್ಯಮನಾಗಳ್ ೪೩

ಕಲವೆಯ ಕೂೞ್ಗಮಗಿಸುವ
ತಿಳಿದುಪ್ಪಂ ತಿವುಡುಗಳೆದ ಪೊಂಬೆಸಱ ಮಹೋ
ಜ್ಜ್ವಳಮಪ್ಪ ಕಂಪಿನಿಂಪಿನ
ನಿಳಯಮುಮೆನಿಸಿರ್ದ ಸವಿಯಿನೊದವಿದ ತೊವೆಯಂ ೪೪

ಅಂತಮೃತದೊಳ್ ಪುರುಡಿಪ್ಪುವ ದಿವ್ಯಾಹಾರಮಂ ಕಯ್ಯೊಳಿಕ್ಕುವುದು ಮಾಕಂಠಂ ಉಂಡು ಬೞಿಕ್ಕೆವೋಗಿರ್ಪುದುಂ

ಬಾೞೆಯ ಕರ್ಜೂರದ ಕಿ
ತ್ತೀಳೆಯ ಕಂಮರದ ರಂಜಿಪಿಮ್ಮಾವಿನ ಪೇ
ರೀಳೆಯ ನಾರಂಗದ ಕಂ
ಚೀಳೆಯ ತನಿವಣ್ಣನಿಕ್ಕೆ ಮೆಲ್ದಾದರದಿಂ ೪೫

ತಣ್ಗರಗದ ತಣ್ಗೋಡುಮಾಲಿನೀರಂ ಆರ್ಪನಿತಂ ಕುಡಿದು ಸಂತೋಷದಿಂ ನುಡಿದು ದಯಾಮಿತ್ರಸೆಟ್ಟಿಯಧ್ಯಕ್ಷಂ ಬೆರಸು ವಿಹಾರಕ್ಕೆ ಬಂದು ಕಾಷ್ಠಾಸನದೊಳ್ ಕುಳ್ಳಿರ್ದು ತನ್ನೊಳ್

ಇವು ಲೇಸವು ಲೇಸೆಂಬೀ
ವಿವರದೊಳೇಂ ಸಕಲಭಕ್ಷ್ಯಮುಂ ಬಾಡುಗಳುಂ
ಸವಿಯೊಳ್ ಸಾಸಿರಮಡಿ ಮಿ
ಕ್ಕುವು ಭಾವಿಸಿ ನೋೞ್ಪೊಡಿಂದ್ರನುಣ್ಬಮೃತಮುಮಂ ೪೬

ಎಂದು ತನ್ನತೂಟಂ ತನಗೆ ಜನ್ಮಾಪೂರ್ವಮಪ್ಪುದಱಿಂ ಮಹಾವಿಸ್ಮಯಂಬಟ್ಟು ಇರುಳ್ಕಂಡ ಕನಸುಗಳಂ ಪಗಲ್ನೆನೆವಂತೆ ನೆನೆಯುತ್ತುಂ ಪಗಲೆಲ್ಲಂ ಸಂತಸದಿಂದಿರ್ದು ನೇಸರ್ಪಟ್ಟೊಂದು ಜಾವಕ್ಕೆ ತೊಟ್ಟನೆ

ಅಸದಳಮೆನಿಸುವ ತೀವ್ರದ
ತೃಷೆ ಮೊಕ್ಕಳಮಾಗೆ ನಾಡೆಯುಂ ಮನದೊಳ್ಸೈ

ರಿಸಲಾಱದೆ ತಲ್ಲಣದಿಂ
ಬಿಸುಸುಯ್ದುಮ್ಮಳಿಸಿ ಬಾಲಲರಿದಾಯ್ತೆನುತಂ ೪೭

ಕೋಡಗಮಂ ಪುಲ್ಲೊಳ್ ಮುಚ್ಚಿ ಸಿಡಿಮಿಡಿಗೊಂಬಂತೆ ಸಿಡಿಮಿಡಿಗೊಳುತ್ತುಂ ಪೆಱರ್ಗೆ ಪೇೞಲಂಜಿ ಲಜ್ಜೆಯಿಂ ಮಾಗಿಯ ಕೋಗಿಲೆಯಂತೆ ಬಾಯ್‌ವಿಟ್ಟಾಡದೆ ಮಳಲೇರಿಯಂತೆ ಜಜ್ಜನೆ ಜರಿದು, ತರುವಲಿಯ ತಲೆಯ ಕಿರೀಟಮನಾಲಿಕಲ್ಲ ಮೞಿಕೊಂಡುದೆಂಬಂತೆನಗೀ ಮುನ್ನಿನಿರುಳ್ಗಳಂ ನೋಡ ಲಿಂದಿನಿರುಳ್ಪಿರಿದಾಯ್ತೋವೊ ಕೆಟ್ಟೆನೆಂದು

ನೀರಱಿ್ಕ ಪೆರ್ಚೆ ನಿಲಲುಂ
ಸೈರಿಸಲುಂ ಬಾರದಳ್ಕಿ ತನ್ನಿಂದಂ ತಾ
ನೋರಂತೆ ಕುದಿದು ಮಱುಗುವ
ಸಾರಂಗದ ಪೋರಿಯಂದಮಂ ನೆಱೆ ಪೋಲ್ತಂ ೪೮

ಅಂತಿರುಳ್ ನಾಲ್ಕು ಜಾವಮುಂ ಪೆರ್ಬಾವಿನಂತೆ ಮುಂಡಲಂಗೊಳ್ಳುತ್ತುಂ ಮಱೆಯ ಪಾರ್ವೊಕ್ಕಲಿಗನಂತೆ ಗಗನಮುಂಡಲಮಂ ನೋಡುತ್ತುಂ, ಕಪ್ಪೆಯಂತೆ ತಣ್ಪಪ್ಪೆಡೆಯೊಳ್ ಪತ್ತುತ್ತುಂ, ಚೊಚ್ಚಲ್‌ಪೆಱುವಳಂತೆ ತೊೞಲುತ್ತುಂ ಕಣ್ಣೊಳೆ ಬೆಳಗಾಗೆ

ನಿಲಲಾಱದಲಸಿ ಪೋದೊಡೆ
ಪಲವುಂ ಚೆಂಬೊನ್ನ ಪಡಪು ಕೆಟ್ಟಪುದು ಕರಂ
ಕಲಿಯಾಗಿ ನಿಂದೆನಪ್ಪೊಡೆ
ನಿಲಲಾಱದು ನೀರ ದೆಸೆಯನುೞಿದಸುವಿನಿಸುಂ ೪

ಮತ್ತಂ ದಯಾಮಿತ್ರಸೆಟ್ಟಿ ನಿಜಾಸೆ ಮನೆಗೆ ಪೋಗಿ ಮನದ ಕಾಂಕ್ಷೆಯಿ ಮುನ್ನಿನಂತುಂಡು ಮುನ್ನಿನ ಮಱುಕದಿಂದಿಮ್ಮಡಿ ಮಱುಕಮಾಗೆ ಮ ದಿವಸಂ ಭಕ್ಷ್ಯದ ದೆಸೆಗೆ ಪಕ್ಷಂಗೆಟ್ಟು, ಪಾಲಿಂಗೆ ಬೆರ್ಚಿ ತುಪ್ಪಕ್ಕಿನಿಸಪ್ಪೊಡ ಮನಂದರಲಾಱದೆ ತೃಷೆಯೊಳಾದ ಭೀತಿಯಿಂದೊಲ್ಲೆನೆಂಬುದುಂ ವೈಶ್ಯವಂ ಲಲಾಮನಿಂತೆಂದಂ

ಅಂತಿಂತೆನ್ನದೆ ಮುಂ ಪೇ
ಳ್ದಂತುಸಿರದೆ ಮೋನದಿಂದಮುಣ್ಬುದು ನಾನೇ
ನಂ ತಂದಿಕ್ಕಿದೊಡಂ ಗುಣ
ವಂತರ್ಕುಲದೊಡೆಯರೆನಿಪ ನಿಮಗಿದು ಪಿರಿದೇ ೫೦

ಅಱಪರಪ್ಪ ರಿಸಿಯರ್ಮೋದಲಾಗಿಯುಸಿರದೆಮ್ಮ ಪೇಳ್ದಂತೆ ಮೋನದಿಂ
ಉಂಬರೆಂದೊಡೆ ಕುಲಜರುಂ ಭೂದೇವರುಮಪ್ಪ ನಿಮಗಿದಾವುದರಿದಾಯ್ತು ಸಿರ
ರಿಮೆಂಬುದುಂ ಮುಱುಮಾತುಗುಡಲಱಯದುಮ್ಮಳಿಸಿ ಬೆಮರ್ತುಸಿರ
ಣುತ್ತುಮಿಾ ಮಾರ್ಗದಿಂದೇೞೆಂಟುದಿವಸಮಿರ್ದಿರಲಾಱದೆ ತಲ್ಲಣಿಸಿ ನಿಂದು
ಸಿನಂದಕ್ಕಲಸಿ "ಕಯ್ತ್ಯೊಳುಂಬುದು ರಯ್ಯಮಲ್ಲದು; ಬತ್ತಲೆಯಿರವು ನಿತ್ತ
ಸಲರಿದು; ನೆಲೆವಕ್ಕೆ ಸಲೆ ಕಷ್ಟಂ" ಎಂದು ಸೈರಣೆಗೆಟ್ಟು,

ಕುಂದದಿನಿಸಂ ಮನಕೆ ಬಂದುಣಿಸನುಂಡು ಪದ
ಪಿಂದೆ ಪೆಱತೇಂ ಕೆಱೆಗೆ ಪೋಗಿ ತಿಳಿನೀರಂ
ಮಿಂದು ಬಿಡದೂರೊಳಗಣೊಂದುಲಿವ ಮಾತುಗಳ
ದಂದುಗದೊಳಾರ್ತೆಸಗಿ ಕೂರ್ತಿರದೆ ನಿಚ್ಚಂ ೫೧

ನಿಂದುಣಿಸಿನಿಂದೊಡಲದೊಂದು ತಿನಿಸಿಂ ತೃಷೆಯ
ದೊಂದು ಕುದಿಪಿಂ ತಿಗುಳನಾಡ ಸೆಱೆಯಂ ತಾ
ನೊಂದಿದತಿ ದುಃಖದೊಳೆ ಬೆಂದು ನಿಲಲಿನ್ನರಿದಿ
ದೆಂದು ವಸುಭೂತಿ ಸೆಡೆದಳ್ಕಿ ಬಡವಾದಂ ೫೨

ಅಂತು ಗಾಳಿಗೊಡ್ಡಿದ ಸೊಡರಂತೆ ನಡುಗಿ, ಮಟದ ಬೆಕ್ಕಿನಂತೊಳಗ
ಕ್ಕೋಡಿಯಾಡಿ, ಒಲ್ಲದ ಪೆಂಡತಿಯಂತೆ ಸುಯ್ದು, ಬೇಸಗೆಯ ಕೋಣನಂತೆ
ನಾಲಗೆಯನುರ್ಚಿ, ಹಾಸುಗೊಂಡ ನಾಯಂತೆ ಸಿಡಿಮಿಡಿಗೊಂಡು, ಹುಣಿಸೆಯ
ಕಾಯಂ ತಿಂದರಂತೆ ಚಳಿತು, ಬಡವೊಡಲಂತೆ ಜೋಲ್ದು, ಮಾಱುವಡೆಯದ
ಸರದನಂತೆ ಕಂದಿ, ತಪ್ಪೇಱದ ಪಱೆಯಂತೆ ದನಿ ಪೋಱಮಡದೆ, ಬಯಲೊಳಿ
ಕ್ಕಿದ ಮಿಾನಂತೆ ಮಿಡುಕಿ, ಸಮ್ಯಕ್ತ್ವ ಚೂಡಾಮಣಿಗಿಂತೆಂದಂ

ಪುಲಿಯ ಮೀಸೆಯುಂನಂಜದುಯ್ಯಲನಾಡಲಪ್ಪುದು ನಂಜನೆಂ
ಜಲಿಸಲಪ್ಪುದು ಸಿಂಹಮುಂ ಪಿಡಿದೇಱಲಪ್ಪುದು ಕಿಚ್ಚಿನೊಳ್
ಳ್ತೊಲಗದೊರ್ಮೆಯೆ ಪಾಯಲಪ್ಪುದು ಸೊಕ್ಕಿದಾನೆಗೆ ಸಂದು ಪ್ರಾ
ರ್ಮಲೆಯಲಪ್ಪುದು ನಿನ್ನ ನೋಂಪಿಗೆ ಗಂಡನಾವನೊ ಸೈರಿಪಂ ॥೬

ಪೇಱಿನ ಮೇಲೆ ಪಾಸಱಿ ಯ್ಯೇಱಿನ ಮೇಲೆ ಬಡಿಗೋಲ್, ಕೊಲೆಯ ಮೇಲೆ ಕವರ್ತೆಯೆಂಬಂತೆ ಸಂತಾಪದ ಮೇಲೆ ಸಂತಾಪಮಂ ಮಾಳ್ಪ ನಿನ್ನ ನೋಂಪಿಯೆಂಬ ಗರಗಸಕ್ಕೆನ್ನ ಮೆಯ್ಯನೊಡ್ಡಲಾಱೆಂ, ಮತ್ತಮೊಂದೆರಡು ತಿಂಗಳ್ ವಿಶೇಷಮಾಗಿ ನೋಂತು ಕೊಟ್ಟಪೆಂ, ಪಿರಿದಪ್ಪೆನ್ನುಮ್ಮಳಿಕೆ ಪೋಪಂತು ನಿಮ್ಮಧ್ಯಕ್ಷಂಬೆರಸು ಕೆಱೆಗೆ ಪೋಗಿ ಮೆಯ್ಯಂ ಕರ್ಚಿಕೊಂಡೊರ್ಮೆಯಿಮೆ ನೀರಂ ಕುಡಿದು ನಿಮ್ಮ ಬೀಡಿನೊಳೊಂದೆರಡು ಗಳಿಗೆ ಸುೞಿದಾಡುವಂತು ಮಾಳ್ಪುದೆನೆ, ದಯಾಮಿತ್ರಸೆಟ್ಟಿ ಬಾಯ ತಂಬುಲಂ ಸೂಸೆ ಕಳಕಳಿ ನಕ್ಕು,

ಕಡುಮೂರ್ಖರ್ ತಮ್ಮಿಚ್ಛೆಗೆ
ಪ್ಪಿಡಿದುದೆ ಪಿರಿದೆಂಬರಣ್ಣ ಜಿನಮಾರ್ಗದೊಳೇಂ
ನಡೆಯಲ್ ಬರ್ಕುಮೆ ಬಾರದು
ಕಡಲೆಗಳಂ ತಿಂಬ ಮೊಗು ಕಲಿಳೊಳುಂಟೇ ॥ – ೫

ಇಂತು ಪಲವು ನೆಗೞ್ತೆಗಳಂ ಮರಣಪರ್ಯಂತಂ ಬೆಂಬೀೞದಲಸದೆ ಸರಿಸದಾಱೆನೆನ್ನದೆ ಬೆಚ್ಚದೆ ನಡೆಯಿಸುವ ಮಹರ್ಷಿಗಳ ಮನದ ಧೈರ್ಯಮ ಬಣ್ಣಿಪನಾವನವಱೊಳ್ಕಿಱಿಯುವಪ್ಪೊಂದೆರಡು ಪರೀಷಹಂಗಳ್ಗೆ ಬೆಂಬಿ ರಕ್ಕಟಾಯೆಂಬುದುಂ ವಸುಭೂತಿ ವಿಸ್ಮಯಂಬಟ್ಟು,

ಅಳಿಪಿಂದಮಳೆಯ ಬರ್ದೆಗೆ
ಯಳೆಯಂ ಕುಡಿಯಿಸಿದರೆಂಬ ತೆಱದಿಂ ಮುನಿಸಂ
ಕುಳಮುಮನಾಸುರ್ಕೆಂದಂ
ಪಳದೊಡೆ ಮುನಿದೆನ್ನ ಸಿಟ್ಟನೆನ್ನೊಳ್ ಕಳೆವಂ

ನರೆ ಬಂದನಿತಱೊಳೆ ನರರ್
ಪಿರಿಯರೆ ಜಿನನಾಥ ಸೇವೆಯುಳ್ಳ ಮನುಷ್ಯರ್
ಧರೆಯೊಳ್ ಕೂಸಾದೊಡಮವ
ರೆರಡಿಲ್ಲದೆ ಪಿರಿಯರವರೆ ಧನ್ಯರ್ ಮಾನ್ಯರ್ ೫೬

ಧರೆ ರಾಜ್ಯಂ ರೂಪು ವೀರಂ ಮಹಿಮೆ ತನುವಿಲಾಸಂ ಬಲಂ ಜೀವಿತವ್ಯಂ
ಸಿರಿ ಸೌಭಾಗ್ಯಂ ಧನಂ ಯೌವನಮುಳವು ಬಳಂ ಸೌಖ್ಯಮೆಂದಿಂತಿವೆಲ್ಲಂ
ಸುರಚಾಪಾಕಾರದಂದಂ ದರಿಯ ಮಹಿಜದಂದಂ ಕರಂ ಕಷ್ಟಮೆಂದುಂ
ಸ್ಥಿರಮಲ್ಲೆಂಬೊಂದು ಜೈನೋಕ್ತಿಯ ಮಹಿಮೆಯನಿಂದಾನೆ ಕಣ್ಣಾರೆ ಕಂಡೆಂ ೫೭

ಆರುಮಿದಕ್ಕೆ ನಿತ್ತರಿಸಲಾಱರೆನಿಪ್ಪ ಪರೀಷಹಂಗಳಂ
ಸೈರಣೆಯಿಂದೆ ಗೆಲ್ವ ಮುನಿಮುಖ್ಯರ ಸಾರ್ದು ಜಿನೇಂದ್ರಧರ್ಮಮಂ
ಸಾರಮೆನಿಪ್ಪುದಂ ತಿಳಿದು ನಂಬಿದರನ್ಯರನೇಕೆ ಪೊರ್ದುವರ್
ಮೇರುವನೇಱಿ ನೋಡಿದವರ್ಗೀ ಧರೆ ತಾಂ ಕಿಱಿದಾಗಿ ತೋರದೇ ೫೮

ಎಂದು ತನ್ನೊಳೆ ವಿಚಾರಿಸಿ ವಾತ್ಸಲ್ಯರತ್ನಾಕರಂಗೆ ಕೈಗಳಂ ಮುಗಿದು ನಿಮ್ಮ ಪಿಡಿದ ಧರ್ಮಮೆ ಲೇಸೆಂಬುದನೀಗಳಱಿದೆಂ ನೀನೆನಗೆ ಧರ್ಮದೊಳಾದಭಿಪ್ರಾಯಮನಱಿಯೆ ಪೇೞಲ್ವೇೞ್ಕೆಂಬುದುಂ ಸೆಟ್ಟಿಯಿಂತೆಂದಂ

ಪರಮಾರ್ಥಮಪ್ಪುದಂ ಮ
ಚ್ಚರಿಸದೆ ಕೋಪಿಸದೆ ಡಂಗೆಗೊಳ್ಳದೆ ಪಕ್ಷ
ಕ್ಕುರಿದೇಳದೊಂದೆ ಮನದಿಂ
ನಿರುತಂ ಕೇಳ್ವವನೆ ಧರ್ಮದೊಳಗಂ ತಿಳಿಗುಂ ೫೯

ರಸಮಂ ಪೊರ್ದಿ ಸಮಂತು ಲೋಹನಿಕರಂ ಪೊನ್ನಪ್ಪವೋಲುರ್ವಿಯೊಳ್
ರಸಮೆಂಬೀ ಪೆಸರಿಂಗೆ ಕೇರ ರಸದೊಳ್ ಪೊನ್ನಕ್ಕುಮೇ ನೋಡ ಪೊ
ರ್ದಿಸಿ ಸದ್ಧರ್ಮಮನೇನು ನಂಬಿ ಸುಖಮಪ್ಪಂತಣ್ಣ ನೀಂ ನೋಡ ಭಾ
ವಿಸಿ ಪೊರ್ದಿರ್ದೊಡೆ ಕೊಲ್ವ ಧರ್ಮದೊಳದೇಂ ಕೈಸಾರ್ಗುಮೋ ತತ್ಸುಖಂ ೬೦

ಎಲ್ಲಿಲ್ಲ ಸುಖಂಗಳೊಳಂ
ನಿಲ್ಲದೆ ನೆರೆದಿರ್ಪೆನೆಂಬ ಮನಮುಳ್ಳೊಡೆ ತ
ಳ್ಪಿಲ್ಲದೆ ಪಿರಿದಾದರದಿಂ
ಕೊಲ್ಲದ ಧರ್ಮಮನೆ ಪಿಡಿಗೆ ನಂಬುಗೆಯಿಂದಂ ೬

ಮರಣಂ ಚಿಂತೆ ಭಯಂ ಮದಂ ಮುಳಿಸು ಮೋಹಂ ಖೇದಂ ರೋಗಂ ಬೆವ
ರ್ಜರೆ ನೀರಟ್ಕೆ ವಿಷಾದಮೂಟ ಜನನಂ ಲೋಭಂ ಮಹಾವಿಸ್ಮಯಂ
ಸ್ಮರಬಾಣಾಹತಿ ನಿದ್ರೆಯೆಂಬಿವಿನಿತಂ ಗೆಲ್ದಾತನೇ ತಾಂ ಜಿನೇ
ಶ್ವರನಿಂದ್ರಾರ್ಚಿತಪಾದನಾತನೆ ವಲಂ ಸೌಖ್ಯಕ್ಕೆ ತಾಂ ಕಾರಣಂ ೬

ಮರನನಜೀವಂತು ಬಲ್ಲರೆ
ಸಿರಿಖಂಡವನಣ್ಣ ಪಗಿನನಜೀವಂತಿರೆ ಕ
ರ್ಪುರಮುಂ ಬಲ್ಲರೆ ಕುತ್ಸಿತ
ಸುರರಂ ನರರಜೀವ ತೆಱದಿನಜೀವರೆ ಜಿನನಂ ೬

ಎಂದು ವಣಿಗ್ವಂಶಲಲಾಮಂ ಪೇೞೆ ವಸುಭೂತಿ ಕೇಳ್ದು ತಾಗಿ ಬಾಗಿದ
ನಂತೆ ಮುನ್ನಿನ ದರ್ಪಂಗೆಟ್ಟು ಕದಡಿ ತಿಳಿದ ನೀರಂತೆ ಮನದೊಳ್ ನಿರ್ಮ
ನಾಗಿ ಸಮ್ಯಗ್ದರ್ಶನಂ ದೊರೆಕೊಂಡುದಕ್ಕೆ ಮನದೊಳಾನಂದಂಬೆತ್ತು
ಸಮ್ಯಕ್ತ್ವ ಚೂಡಾಮಣಿಯಂ ನಾನಾವಿಧದಿಂ ಪೊಗೞ್ದು ದರ್ಶನದೊಳ್
ದೃಢನಾಗಿರ್ದನನ್ನೆಗಮಿಭಾನ್ವಯ ಪವಿತ್ರಂ ಮಱುದಿವಸಂ ಬೀಡನೆತ್ತಿ ಕ
ಪಯ ಪಯಣಂಬೋಗಿ ನಂದ್ಯಾವಲಿಯೆಂಬ ಪೇರಡವಿಯೊಳ್ ಬೀಡ
ಬಿಡುವುದುಂ,

ನೆರೆದು ವನಚರರುಮೊರ್ಮೆಯೆ
ಭರವಶದಿಂ ತಾಗೆ ಸೆಟ್ಟಿ ಪಿರಿದಪ್ಪ ಬಲಂ
ಬೆರಸಿದಿರನದಿರದಣ್ಮಿಂ
ಕರಿಯೊಡ್ಡಂ ಸಿಂಹದೊಡ್ಡು ತಾಗುವ ತೆಱದಿಂ ೬

ತಾಗಿ ಕಿಚ್ಚುಂ ಕಿಡಿಯುವನಾಗಿ ಕಾದುತ್ತುಮಿರೆ, ದೂರದೊಳಿರ್ದ ವಸುಭೂತಿಯಂ

ಅಂಬರಿಗುವನಾಯುತಪ್ಪಿದೊ
ಡೆಂಬೀ ನಾಣ್ಣುಡಿಯನಲ್ಲಿ ಪುಸಿಮಾಡದೆ ಕೂ
ರಂಬೊಂದು ಬಂದು ನಡೆ ನೋ
ವಿಂ ಬಿದ್ದಂ ಸಾವ ಪೊತ್ತನಾವಂ ಬಲ್ಲಂ ೬೫

ಅನಂತರಂ ಸೆಟ್ಟಿ ಬೇಡರೊಡ್ಡಂ ಗೆಲ್ದು ಬಂದು ನೊಂದಿರ್ದ ವಸುಭೂತಿಗೆ ಧರ್ಮವಾತ್ಸಲ್ಯದಿಂ ಸನ್ಯಸನಮಂ ಕೊಟ್ಟು ಪಂಚನಮಸ್ಕಾರಮಂ ಪೇಳುತ್ತಿರ್ಪುದುಂ ತನಗೆ ಜಿನನೆ ದೈವಮೆಂಬ ಭಾವನೆಯಿಂ ವಸುಭೂತಿ ದಯಾಮೂಲಮಪ್ಪ ಧರ್ಮಮಂ ನೆನೆಯುತ್ತೆ ಮುಡಿಪಿ ದರ್ಶನಫಲದಿಂ ಸೌಧರ್ಮಕಲ್ಪದೊಳ್ ಮಣಿಪ್ರಭಾವಿಮಾನದೊಳ್ ಮಣಿಕುಂಡಲನೆಂಬ ದೇವನಾಗಿ ಪುಟ್ಟುವುದುಂ,

ಇದು ನಿನ್ನಿರ್ಪ ಮಹಾಪ್ರಭೋರ್ಜಿತವಿಮಾನಂ ನೂತ್ನಲಾವಣ್ಯದಿಂ
ದೊದವಿರ್ದೀ ದಿವಿಜಾಂಗನಾಸಮಿತಿ ಪೆಂಪಿಂ ನಿನ್ನ ಕಾಂತಾಜನಂ
ಮುದದಿಂದೀ ವಿಬುಧಾಳಿ ನಿನ್ನ ಪರಿವಾರಂ ದೇವ ಕೈಕೊಂಡು ಕಾ
ವುದು ನೀನೆಂದು ಸುರಾಳಿ ಬಿನ್ನವಿಸೆ ತದ್ದೇವಂ ಮಹಾಚೋದ್ಯದಿಂ ೬೬

ಆ ನಾರೀಲೋಕಮಾವುದೀ ಕೇಳಿಸುತ್ತಿರ್ದ ಪರಿಜನಮಾರೆಂದು ಕುಟುಂಬನರಸುಗಂಡಂತೆ ನೋಡುತ್ತುಮಿರ್ಪನ್ನೆಗಂ ಭವಪ್ರತ್ಯಯಜ್ಞಾನಂ ಪುಟ್ಟೆ ತಜ್ಞಾನದಿಂ ಪೆಱಗಣ ಭವಮನಱಿದು ಬೆಱಗಾಗಿ,

ಪುಸಿದೆನ್ನಂ ಪೊನ್ನಿಂ ಬಂ
ಚಿಸಿ ವೈಶ್ಯನುಪಾಯದಿಂದೆ ದರ್ಶನಮಂ ಬ
ಣ್ಣಿಸೆ ನಂಬಿ ದೇವನಾದೆಂ
ವಸುಧೆಗೆ ಸಮ್ಯಕ್ತ್ವಮುಳ್ಳ ಮನುಜನೆ ದೇವಂ ೬೭

